

# ಕನ್ನಡ ವಿಶ್ವವಿದ್ಯಾಲಯ

## ಹಂಪಿ

೨೦೧೫–೧೬ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

# ಡಾ. ಸಿ.ಪಿ.ಕೆ. ಅವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆ

ನಿಬಂಧಕಾರರು
ನೋಂದಣಿ ಸಂಖ್ಯೆ : KVTM/K 150901030043
ಕನ್ನಡ ಎಂ.ಫಿಲ್ ವಿದ್ಯಾರ್ಥಿ (ಹಂಪಿ, ಕ.ವಿ.ವಿ.)



೨೦೧೫–೧೬





ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೫–೧೬ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

# ಡಾ. ಸಿ.ಪಿ.ಕೆ. ಅವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆ

ನಿಬಂಧಕಾರರು
ನೋಂದಣಿ ಸಂಖ್ಯೆ : KVTM/K 150901030043
ಕನ್ನಡ ಎಂ.ಫಿಲ್ ವಿದ್ಯಾರ್ಥಿ (ಹಂಪಿ, ಕ.ವಿ.ವಿ.)

೨೦೧೫–೧೬

# ಡಾ. ಸಿ.ಪಿ.ಕೆ. ಅವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆ

## ಪರಿವಿಡಿ



*****

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಚುಟುಕು ಸಾಹಿತ್ಯ ತನ್ನದೇ ಆದ ವಿಶೇಷವಾದ ಸ್ಥಾನಮಾನವನ್ನು ಹೊಂದಿದೆ. ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಚುಟುಕು ಸಾಹಿತ್ಯ ಪ್ರಕಾರವು ಒಂದಾಗಿದ್ದು, ಚುಟುಕು ಎಂಬುದು ಕೇವಲ ಮೂರಕ್ಷರವಾದರೂ ಇದು ತಿಳಿಸುವ ಸಾರ ಅತ್ಯದ್ಭುತವಾಗಿದೆ. ಚುಟುಕು ಯಾವುದೋ ಅನಿಸಿಕೆಯನ್ನು ಸುಂದರವಾಗಿ ಅಭಿವ್ಯಕ್ತಗೊಳಿಸ-ಬಹುದು; ಅಥವಾ ಅದೊಂದು ಆಕರ್ಷಕ ಹೇಳಿಕೆಯಾಗಿರಬಹುದು. ಆದರೆ ಒಂದು ಅನುಭವದ ಆವಿಷ್ಕಾರವಾದಾಗ, ಹೆಚ್ಚಿನ ಮೌಲ್ಯವನ್ನು ಗಳಿಸಿಕೊಳ್ಳುತ್ತದೆ.

ಚುಟುಕುಗಳು ಹೇಳುವಂತಹ ವಿಷಯಗಳು ನೇರನುಡಿಗಳಾಗಿರುತ್ತವೆ. ಆಡುಮುಟ್ಟದ ಸೊಪ್ಪಿಲ್ಲವೆಂದು ಹೇಗೆ ಹೇಳುತ್ತೇವೆಯೋ ಹಾಗೆಯೇ ಚುಟುಕು ಕುಟುಕದೆ ಇರುವಂತಹ ಕ್ಷೇತ್ರವೇ ಇಲ್ಲವೆಂದು ಹೇಳಬಹುದಾಗಿದೆ. ಆದ್ದರಿಂದಲೇ ಚುಟುಕು ಮೇಲುನೋಟಕ್ಕೆ ವಾಮನರೂಪಿ, ನಾಲ್ಕಾರು ಸಾಲುಗಳ ರೂಪದಲ್ಲಿ ಇರತಕ್ಕದ್ದು. ಆದರೆ ಅದರ ಸತ್ವ ಸಾಧಾರಣವಾದದ್ದಲ್ಲ, ಅಸಾಧಾರಣವಾದದ್ದು. ಸಮಾಜದ ಅಂಕು-ಡೊಂಕುಗಳನ್ನು ತನ್ನದೇ ಆದ ಪರಿಮಿತಿಯಲ್ಲಿ ಇಡೀ ಜಗತ್ತಿಗೆ ಸಾರುವ ಮಹಾನ್ ಶಕ್ತಿ ಚುಟುಕುವಿನಲ್ಲಿದೆ.

ಚುಟುಕು ಸಂಕ್ಷಿಪ್ತತೆಯಿಂದ ಕೂಡಿದ್ದು ಧ್ವನಿಪೂರ್ಣತೆಯ ದ್ಯೋತಕವಾದುದಾಗಿದೆ. ಇದೇ ಸಂದರ್ಭದಲ್ಲಿ "ಮೂರ್ತಿ ಚಿಕ್ಕದಾದರೂ, ಕೀರ್ತಿ ದೊಡ್ಡದು" ಎಂಬ ಗಾದೆ ಮಾತನ್ನು ಸ್ಮರಿಸಬಹುದಾಗಿದೆ. ಇದು ಕಣದಲ್ಲಿ ಜಗತ್ತನ್ನು ಕ್ಷಣದಲ್ಲಿ ಅನಂತತೆಯನ್ನು ತೋರುವ ಒಂದು ಹಿಮಮಣಿಯಾಗಿದೆ. ಹೀಗಾಗಿಯೇ ಚುಟುಕು ಒಂದು ಮಿನುಗು, ಮಿಂಚು, "moments monument" (ಮುಹೂರ್ತದ ಸ್ಮಾರಕ). ಆದರೆ ಪರಿಣಾಮದಲ್ಲಿ ಕ್ಷಣಿಕವಾದುದಲ್ಲ.

ಚುಟುಕು ಸಾಹಿತ್ಯ ಎಲ್ಲರನ್ನು ಸೆಳೆಯುವ ಆಕರ್ಷಕ ಗುಣವನ್ನು ಹೊಂದಿದೆ. ಏಕೆಂದರೆ ಪ್ರತಿಭೆಯಿಂದ ಹೊರಹೊಮ್ಮುವಂತದ್ದು. ಆದ್ದರಿಂದಲೇ "ಪ್ರತಿಭಾತಾರತಮ್ಯೇನ ಪ್ರತಿಷ್ಠಾಭುವಿ ಭೂರಿದಾ" ಎಂಬ ರಾಜಶೇಖರನ ಉಕ್ತಿಯನ್ನು ಸ್ಮರಿಸಬಹುದು. ವಾಮನನು ಹೇಳುವ ಹಾಗೆ ಚುಟುಕು ಎಂಬುದು 'ಕವಿತ್ವ ಬೀಜವೂ' ಆಗಿದೆ.

ಚುಟುಕು ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಇವೇ ಮುಂತಾದ ಕ್ಷೇತ್ರಗಳಲ್ಲಿನ ಅನ್ಯಾಯ, ಮೋಸ, ವಂಚನೆ, ದಬ್ಬಾಳಿಕೆ ಮೊದಲಾದ ದುಷ್ಟಟಗಳನ್ನು ಕುಟುಕಿ, ತನ್ನ ಸ್ಥಾನವನ್ನು ಎತ್ತಿತೋರಿಸುತ್ತಿದೆ. ಇಂದು ಇಷ್ಟೆಲ್ಲಾ ಸ್ಥಾನವನ್ನು ಚುಟುಕು ಹೊಂದಿದ್ದರು,

ಅಂತರ್ಜಾಲದಲ್ಲಿ ಇದರ ಬಗ್ಗೆ ಪೂರ್ಣ ಮಾಹಿತಿ ದೊರೆಯುತ್ತಿಲ್ಲ. ಇದರ ಸ್ಥಾನಮಾನವನ್ನು, ಘನತೆಯನ್ನು ತಿಳಿಸಿಕೊಡಲು ಅಲ್ಲದೆ, ೨೧ನೇ ಶತಮಾನದಲ್ಲಿ ಚುಟುಕುವಿನ ಅಗಾಧತೆ ಎಂತದ್ದು ಎಂಬುದನ್ನು ತೋರ್ಪಡಿಸಲು ಇಂದು ಗಂಭೀರವಾದಂತಹ ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಹೊಂದಲಾಗಿದೆ.

ಚುಟುಕು ಸಾಹಿತ್ಯ ಇತ್ತೀಚೆಗೆ ರಚನೆಯಾದುದಲ್ಲ. ಕನ್ನಡ ಸಾಹಿತ್ಯದಲ್ಲಿ ಚುಟುಕು ಪ್ರಾಚೀನಕಾಲದಿಂದಲೂ ಮುಕ್ತಕ ಸಾಹಿತ್ಯ ಹೀಗೆ ನಾನಾ ರೂಪದಲ್ಲಿ ಬೆಳೆದುಬಂದಿದೆ. ಕಪ್ಪೆ ಹರಭಟ್ಟನ ಶಾಸನದಲ್ಲಿ

**ಸಾಧುಗೆ ಸಾಧು**
**ಮಾಧುರ್ವಂಗೆ ಮಾಧುರ್ಯ**
**ಬಾಧಿಪ್ಪ ಕಲಿಗೆ**
**ಕಲಿಯುಗ ವಿಪರೀತನ್**
**ಮಾಧವನೀತನ್; ಪೆರನಲ್ಲ**

ಹೀಗೆ ಈ ಮೇಲಿನ ತ್ರಿಪದಿಯಲ್ಲಿಯೇ ಚುಟುಕನ್ನು ಗುರ್ತಿಸಲಾಗಿದೆ. ಅಲ್ಲದೆ ಗ್ರೀಕ್‌ನ ಸಟೈರ್ ವಿಡಂಬನ ಸಾಹಿತ್ಯವನ್ನು ಬರೆದನು. ಇಲ್ಲಿಯೂ ಚುಟುಕು ಮೊಳಕೆಯೊಡೆದಿದ್ದನ್ನು ಗಮನಿಸಬಹುದಾಗಿದೆ. ಹೀಗೆ ಶತಮಾನಗಳ ಹಿಂದೆಯೇ ಚುಟುಕು ಜನಿಸಿದ್ದು, ಇಂದು ಹೆಮ್ಮರವಾಗಿ ತನ್ನ ವಿಶಾಲತೆಯನ್ನು ಹೊಂದಿದೆ.

ಕನ್ನಡ ಸಾಹಿತ್ಯ ಕ್ಷೇತ್ರವೆಂಬ ಹೊಲದಲ್ಲಿ ಪ್ರಾಚೀನ ಕಾಲದಲ್ಲಿಯೇ ಚುಟುಕು ಎಂಬ ಬೀಜವನ್ನು ಬಿತ್ತನೆ ಮಾಡಿ, ಬಂದಂತಹ ಫಸಲನ್ನು ಇಂದು ಪಡೆಯುತ್ತಿದ್ದು, ಉಳಿದ ಧಾನ್ಯವನ್ನು ಮುಂದಿನ ಪೀಳಿಗೆಗೂ ಹೊತ್ತೊಯ್ಯಲಾಗುತ್ತಿದೆ. ಆಧುನಿಕತೆಯಲ್ಲಿ ಜಿ.ಪಿ.ರಾಜರತ್ನಂ ದಿನಕರ ದೇಸಾಯಿ, ಡುಂಡಿರಾಜ್, ಅಕಬರ ಅಲಿ, ಚಂಪಾ, ಡಾ. ಸಿ.ಪಿ.ಕೃಷ್ಣಕುಮಾರ್ ಇವರೇ ಮೊದಲಾದವರಿಂದ ತನ್ನ ಶ್ರೀಮಂತಿಕೆಯನ್ನು ವೃದ್ಧಿಸಿಕೊಂಡಿದೆ. ಹೀಗಾಗಿ 'ಡಾ. ಸಿ.ಪಿ.ಕೆ. ಅವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆ' ಎಂಬ ವಿಷಯವನ್ನು ಆಯ್ದುಕೊಂಡು ಅಧ್ಯಯನವಾರು ವಿಭಾಗಿಸಿ, ಆರು ಭಾಗಗಳಾಗಿ ವಿಂಗಡಿಸಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯಾಗಿದ್ದು, ಈ ನಿಬಂಧದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಚುಟುಕು ಸಾಹಿತ್ಯದ ಪರಂಪರೆ ಸ್ವರೂಪ ಮತ್ತು ವ್ಯಾಪ್ತಿ, ಮಹತ್ವ, ಗುಣಲಕ್ಷಣಗಳು, ಚುಟುಕುವಿನ ನೆಲೆ-ಬೆಲೆ, ಚುಟುಕು ಸಾಹಿತ್ಯ ಬದುಕಿಗೆ ಲಾಲಿತ್ಯ,

ಚುಟುಕು ಮನುಕುಲದ ಆದಿಕಾವ್ಯವಾಗಿದ್ದು, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿರುವ ಚುಟುಕು ಸಾಹಿತ್ಯದ ಇತಿಹಾಸವನ್ನು ತಿಳಿಸಿಕೊಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ಡಾ. ಸಿ.ಪಿ.ಕೆ ಅವರ ಬದುಕು-ಬರೆಹ ಅವರ ಜೀವನ ಮತ್ತು ಸಾಧನೆ, ವಿಚಾರ ಮತ್ತು ಚಿಂತನೆಗಳು, ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಅಪಾರ ಸೇವೆ ಹಾಗೂ ಅವರನ್ನು ಅರಸಿ ಬಂದ ಪ್ರಶಸ್ತಿಗಳ ಬಗ್ಗೆ ತಿಳಿಸಿಕೊಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಚುಟುಕು ಸಾಹಿತ್ಯವನ್ನು ರೂಢಿಸಿದ ಕವಿಗಳು ಯಾರೆಂಬುದನ್ನು, ಅವರ ಕಿರುಪರಿಚಯವನ್ನು ಮಾಡಿಕೊಡಲಾಗುತ್ತದೆ.

ಇದೇ ವಿಭಾಗದಲ್ಲಿ ಡಾ. ಸಿ.ಪಿ.ಕೆ. ಅವರ ಚುಟುಕುಗಳ ವಿವಿಧ ನೆಲೆಗಳನ್ನು ಪರಿಚಯಿಸಿ, ಆ ನೆಲೆಯ ಆಧಾರದ ಮೇಲೆ ಸಮಾಜದ ವಿವಿಧ ಸ್ತರಗಳ ಮೇಲೆ ಚುಟುಕುಗಳು ಹೇಗೆ ರಚನೆಗೊಂಡವು ಎಂಬುದನ್ನು ವಿಶ್ಲೇಷಿಸಲಾಗುತ್ತದೆ. ಧರ್ಮದ ನೆಲೆಯ ಆಧಾರದ ಮೇಲೆ ಏಕತೆಯಲ್ಲಿ ಐಕ್ಯತೆಯನ್ನು, ರಾಜಕೀಯದಲ್ಲಿ, ಹಾಸ್ಯದಲ್ಲಿ, ಸಾವು, ಹೆಣ್ಣನ್ನು ಕುರಿತಾದ ಚುಟುಕುವಿನ ನೆಲೆಯನ್ನು ಗುರ್ತಿಸಿ, ಹೀಗೆ ವಿವಿಧ ನೆಲೆಗಳಲ್ಲಿ ಚುಟುಕು ಸಾಹಿತ್ಯ ರೂಪಿಸಿದ ಛಾಪನ್ನು ಪ್ರತಿಬಿಂಬಿಸಿ ವಿಶ್ಲೇಷಿಸಲಾಗುತ್ತದೆ.

ಅಧ್ಯಾಯ ಆರು ಉಪಸಂಹಾರದಲ್ಲಿ ಇದುವರೆಗಿನ ಎಲ್ಲಾ ಅಧ್ಯಾಯಗಳಲ್ಲಿ ಒಟ್ಟಾರೆಯಾಗಿ ವ್ಯಕ್ತವಾಗಿರುವ ಡಾ. ಸಿ.ಪಿ.ಕೆ. ಅವರು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾಣಿಕೆಯನ್ನು ವಿವೇಚಿಸಲಾಗಿದೆ. ಜೊತೆಗೆ ಸಾಹಿತ್ಯ ಕ್ಷೇತ್ರದಲ್ಲಿ ಅವರು ಪಡೆದುಕೊಂಡಂತಹ ಸ್ಥಾನಮಾನವನ್ನು ಗುರುತಿಸಲಾಗಿದ್ದು, ಕನ್ನಡ ಕಾವ್ಯಲೋಕಕ್ಕೆ ಸಿ.ಪಿ.ಕೆ. ಅವರಿಂದ ದೊರೆತ ಹೊಸ ಆಯಾಮ ಮುಂತಾದ ವಿಷಯಗಳ ಬಗೆಗಿನ ಒಟ್ಟು ಅಭಿಪ್ರಾಯವನ್ನು ಕೊನೆಯ ಮಾತುಗಳಲ್ಲಿ ಮಂಡಿಸಲಾಗಿದೆ.

*****

# ಅಧ್ಯಾಯ – ೨

# ಚುಟುಕು ಸಾಹಿತ್ಯ ನಡೆದು ಬಂದ ದಾರಿ

**ಚುಟುಕು ಸಾಹಿತ್ಯದ ಪರಂಪರೆ**

"ವಚನ ಸಾಹಿತ್ಯದಿಂದ ತನ್ನ ಭಾವಕೋಶವನ್ನು, ಪದಕೋಶವನ್ನು ತುಂಬಿಕೊಂಡಿರಬಹುದಾದ ಸರ್ವಜ್ಞನನ್ನೇ ನಮ್ಮ ಮೊದಲ ಧೀಮಂತ ಶ್ರೀಮಂತ ಚುಟುಕು ಕವಿ ಎನ್ನಬೇಕು. ಸರ್ವಜ್ಞನು ಅದರ ಸಾಧ್ಯತೆಗಳನ್ನು ಬಹುಮಟ್ಟಿಗೆ ಸೂರೆಮಾಡಿ ಆ ಪರಂಪರೆಯನ್ನು ಉದ್ಘಾಟಿಸಿದ. ಅದರ ದಿಗಂತಗಳನ್ನೂ ಕಂಡಿದ್ದಾನೆ. ಹಿನ್ನೋಟ ಹರಿಸಿದರೆ ನಮ್ಮ ಮಹಾಕಾವ್ಯಗಳಲ್ಲಿ, ಗಾದೆ ಮಾತುಗಳಲ್ಲಿ ಕಿಡಿಗಟ್ಟುವ ಸುಭಾಷಿತಗಳಲ್ಲಿ ಅನ್ಯೋಕ್ತಿ ರೂಪಕಗಳಲ್ಲಿ ಚುಟುಕುವಿನ ಬೇರನ್ನು ಕಾಣಬಹುದಾಗಿದೆ.

ಸರ್ವಜ್ಞನನ್ನು ಕೇಂದ್ರಬಿಂದುವಾಗಿರಿಸಿಕೊಂಡು ಹಿಂದಕ್ಕೆ ಹೆಜ್ಜೆ ಹಾಕಿದರೆ ಅನೇಕ ಸ್ಪಷ್ಟಾಸ್ಪಷ್ಟ ಹೆಜ್ಜೆಗಳನ್ನು ಗುರುತಿಸುತ್ತಾ ಹೋಗಬಹುದು. ಕ್ರಿ.ಶ.೭೦೦ರ ಬಾದಾಮಿ ಶಾಸನದಲ್ಲಿ ಚಿತ್ರಿತವಾಗಿರುವ ಕಪ್ಪೆ ಹರಭಟ್ಟನ ವ್ಯಕ್ತಿತ್ವ ನಿರೂಪಣೆ ಅತ್ಯುತ್ತಮ ಚುಟುಕುವಿನ ಮಾದರಿಯಾಗಿದೆ.

**ಸಾಧುಗೆ ಸಾಧು**
**ಮಾಧುರ್ಯಂಗೆ ಮಾಧುರ್ಯಂ**
**ಬಾಧಿಪ್ಪ ಕಲಿಗೆ**
**ಕಲಿಯುಗ ವಿಪರೀತನ್**
**ಮಾಧವನೀತನ್; ಪೆರನಲ್ಲ**

ಹೀಗೆ ಚುಟುಕು ಎಂದರೇನು? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಚುಟುಕು ಎಂಬುದು ಹ್ರಸ್ವರೂಪಿಯಾಗಿದ್ದು ತ್ರಿಲೋಕ ವಿಕ್ರಮ ಸಾಧಿಸುವ ಹವಣುಳ್ಳ ಕಾವ್ಯ ಬಿಂದು. ಚುಟುಕು ಎಂಬುದಕ್ಕೆ ಬಸವಣ್ಣನವರ "......ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ"[೧] ಎಂಬ ಮಾತು ಒಪ್ಪುತ್ತದೆ. ಹೀಗೆ ಅಪರಿಮಿತವಾದುದನ್ನು ಹಿಡಿಯಲಾಗದ್ದನ್ನು ಹಿಡಿದು ಚುಳುಕಾಗಿಸುವ, ಬೆಳಕಾಗಿಸುವ ಸಾಹಸವೇ ಚುಟುಕಾಗಿದೆ.

ಹಳಗನ್ನಡ ಚಂಪೂಕಾವ್ಯಗಳಲ್ಲಿ, ವಡ್ಡಾರಾಧನೆಯಲ್ಲಿ ಅಸಂಖ್ಯಾತ ಚುಟುಕು ಮಾತುಗಳಿವೆ. ತನ್ನಷ್ಟಕ್ಕೆ ಸ್ವಯಂಪೂರ್ಣವಾದ, ಸಾರ್ವತ್ರಿಕವಾದ ಚಿಂತನಾಂಶಗಳನ್ನು

---

೧. "ಚುಟುಕು ಸಾಹಿತ್ಯ ಪರಂಪರೆ ಹಾಗೂ ಸಿಪಿಕೆ" ಚುಟುಕುಗಳ ಸಮೀಕ್ಷೆ, ಎ.ಎನ್.ಜಯರಾಂ, ಪು. ೨

ಕಟ್ಟಿಕೊಡುವ ನೂರಾರು ಮಾತುಗಳು ಚಂಪೂಕಾವ್ಯಗಳಲ್ಲಿ ಕಿಡಿಗುಟ್ಟುತ್ತಿದೆ. ಪಂಪಕವಿಯ ಅಡವಿಯೊಳಗೆ ಪೂತಪೂರ್ವಸೂಚಿಯ ಕೂರ್ಪು ಕುಂಬಳದೊಳಡಗುವಂತೆ......, ಮರುಳ್ಗೆಧೂಪಂ ತೋರಿದ ಮಾಜ್ಕೆ......., ಆನೆಮೆಟ್ಟಿದ ಕುಳುಂಪೆನೀರಂತೆ ಇತ್ಯಾದಿ.

ಕನ್ನಡದ ದುರ್ಗಸಿಂಹನಲ್ಲಂತೂ ಅನೇಕ ನಾಣ್ಣುಡಿಗಳು ಪಡೆನುಡಿಗಳು ನುಗ್ಗಿಬರುತ್ತವೆ. ವಿಡಂಬನೆ ಅವನ ವಿಶೇಷ ಅಸ್ತ್ರವಾಗಿದೆ. 'ಕೋಡಗದರ್ದೆ ಕೊಂಬಿನ ಮೇಲೆ"[೧] ಎಂಬುದು ಒಂದು ಕಥೆಯನ್ನೇ ಬಿಚ್ಚುತ್ತದೆ. ಹಾಗೆಯೇ ಕವಿ ನಾಗಚಂದ್ರನ ಅಬ್ಧಿಯುಂ ಒರ್ಮೆ ಕಾಲವಶದಿಂದ ಮರ್ಯಾದೆಯಂ ದಾಂಟದೆ? "ಕಾರಣ ವಿಘಟನಮೇ ಕಾರ್ಯ ವಿಘಟನ ಮತ್ತಿ?" ಎಂಬ ಉದ್ಗಾರಗಳು ಚುಟುಕುಗಳೇ ಆಗಿವೆ.

ಹೀಗೆ ಜನ್ನನ 'ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯ ಕೊಂದು ಕೂಗದೆ ನರರಂ? ಎನ್ನುವ ಪ್ರಸಿದ್ಧವಾದ ಉದ್ಗಾರ, ರುದ್ರಭಟ್ಟನ "ಕಡಲು ಪೀರ್ವಂಗಂ ಅರಿದೆ ಕುಡಿತೆಯ ಸಲಿಲಂ"[೨] ಎಂಬ ಹತ್ತಾರು ವಾಕ್ಯಗಳು ಉಲ್ಲೇಖಾರ್ಹವಾಗಿವೆ. ವಿಡಂಬನೆಗೆ ಎತ್ತಿದ ಕೈಯಾದ ಬ್ರಹ್ಮಶಿವನ ಈ ಪ್ರಖ್ಯಾತವಾದ ವಾಗ್ಧಾಳಿಯನ್ನು ಯಾರು ತಾನೇ ಕಂಡಿಲ್ಲ?

**ಒಡಲ ಒರ್ ಭಾಗಮನ್ ಇತ್ತಂ(ಗಡ)**
**ಕಾಂತೆಗೆ ಶಂಭು**
**ಶಂಭುಗಂ ಕೊಟ್ಟಳ್**
**ತನ್ನೊಡಲೊರ್ ಭಾಗಮನ್ ಅಗಸುತೆ**
**ಮಿಕ್ಕೆರಡರೆಯನ್**
**ಆಗ ಕೊಟ್ಟರೋ ಪೇಳಿಂ**

ಇದು ಆಧುನಿಕ ಚುಟುಕುವಿನಲ್ಲಿ ಕಾಣಸಿಗುವ ಲೇವಡಿಯಂತೆ ಕುಟುಕುತ್ತದೆ.

ವಚನಕಾರರಲ್ಲಿ ದೇವರ ದಾಸಿಮಯ್ಯ ಮೊದಲಾದ ಅಸಂಖ್ಯಾತ ವಚನಕಾರರು ಕನ್ನಡ ಜನಪದ ಭಾಷೆಯನ್ನು ಹದಗೊಳಿಸಿ ಹುರಿಗೊಳಿಸಿ ಕಾವ್ಯಪದಕ್ಕೇರಿಸಿದರು. ಮಾತು ವಚನವಾಯಿತು; ಬಯಲು ಬಾಯ್ದೆರೆಯಿತು; ಅನುಭವ ಅನುಭಾವವಾಯಿತು; ನುಡಿಸಿಡಿ–ತಲೆಯಾಯಿತು; ತಲೆವಣಿಯಾಯಿತು.

ವಚನಕಾರರಲ್ಲಿ ತಲೆವಣಿಯಾಗಿರುವ ಅಲ್ಲಮಪ್ರಭುದೇವನ ಮಾತಂತು ಮಿಂಚಿನಂತೆ, ಶಲಾಕೆಯಂತೆ ಇವೆ. ಮಂಜಿನ ಶಿವಾಲಯಕ್ಕೆ ಬಿಸಿಲ ಕವಚವುಂಟೆ? ತಾನಿಟ್ಟ ಬೇತಾಳ ತನ್ನ

---

೧. "ಚುಟುಕು ಸಾಹಿತ್ಯ ಪರಂಪರೆ ಹಾಗೂ ಸಿಪಿಕೆ" ಚುಟುಕುಗಳ ಸಮೀಕ್ಷೆ, ಎ.ಎನ್.ಜಯರಾಂ, ಪು. ೫
೨. ಅದೇ.,

ತಿಂದಿತು, ಊರಕ್ಕಿ, ಊರೆಣ್ಣೆ ಉಣ್ಣು ಮಾರಿಕತ್ವ. ಹೀಗೆ ಅಲ್ಲಮನ ಬೆಡಗಿನ ನುಡಿಗಳು ಚುಟುಕು ಕವಿಗೆ ಮಾರ್ಗದರ್ಶಿಯಾಗಿದೆ.

ಹಾಗೆಯೇ ಬಸವಣ್ಣನವರು ನುಡಿದರೆ ಮುತ್ತಿನಹಾರದಂತಿರಬೇಕು....... ಲಿಂಗ ಮೆಚ್ಚಿ ಅಹುದೆಹುದೆನುತಿರಬೇಕು, ಸ್ಥಾವರಕ್ಕಳಿವುಂಟು; ಜಂಗಮಕ್ಕಳಿವಿಲ್ಲ ಇಂದಿಗೆ ಗ್ರಹಣವಾಯಿತು. ಇನ್ನೊಂದಿಗೇ ಮೋಕ್ಷವೋ ಕೂಡಲಸಂಗ ಮುಂತಾದವು ಅಕ್ಕಮಹಾದೇವಿಯ ಬೆಟ್ಟದ ಮೇಲೊಂದು ಮನೆಯಮಾಡಿ, ಲೋಕದ ಚೇಷ್ಟೆಗೆ ರವಿಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ ಮುಂತಾದ ಅಸಂಖ್ಯಾತ ರಚನೆಯಲ್ಲಿ ಒಂದು ಹೊಸಧೋರಣೆ, ಸಮಾಜಟೀಕೆ, ಆತ್ಮದ ನೋವು ಇವೆಲ್ಲ ಸಮರ್ಥವಾಗಿ ನುಡಿಗೊಂಡಿವೆ. ಹೀಗಾಗಿ ಇವುಗಳು ಆಧುನಿಕ ಚುಟುಕುಗಳಂತಿದ್ದು ವಚನದ ಘನತೆಯಲ್ಲಿ, ಗೋಪುರವೇರಿ ನಿಂತಿವೆ, ಹೆಚ್ಚು ಕಾವ್ಯಮಯವಾಗಿದೆ.

ರಾಘವಾಂಕನು ಸ್ವಂತಿಕೆಯಿಂದ ಕೂಡಿದ ಅನೇಕ ನಾಣ್ನುಡಿಗಳನ್ನು ಶಕ್ತವಾಗಿ ಪ್ರಯೋಗಿಸಿದ್ದಾನೆ. ನಡೆವರೆಡಹದೆ ಕುಳಿತರೆಡಹುವರೆ? ಕೋಣನೆರಡುಂ ಹೋರಗಿಡುವಿಂಗೆ ಮತ್ತು ಹೆತ್ತತಾಯಿ ಮಾರಿ ಕೊತ್ತಕೊಂಬರೆ? ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು. ಹೀಗೆ ಇವುಗಳನ್ನು ಚುಟುಕುಗಳೆಂದೇ ಕರೆಯಬಹುದಾಗಿದೆ. ಹಾಗೆಯೇ ರೂಪಕ ಸಾಮ್ರಾಜ್ಯ ಚಕ್ರವರ್ತಿ ಕುಮಾರವ್ಯಾಸನು ಕಂಗಳನು ಕಾರಿರುಳ ರಕ್ಕಸಿ ನುಂಗಿದಳು, ಮುಗಿಲ ಬೆನಕಂಗೆ ಲಡ್ಡುಗೆಗಳಾದವು ಸಮಸ್ತ ಗ್ರಹಸುತಾರೆಗಳು, ಬೆಳದಿಂಗಳಲಿ ಮೈ ಬೆವರುವುದೆ? ಹೊಕ್ಕುಳಲಿ ಹೂ ಮಗುವುಂಟೆ? ಹಣೆಯಲಿ ನೋಟವುಂಟೆ? ಹಾಗೆಯೇ ರತ್ನಾಕರನ ಉಂಡವ ತೇಗುವಂತೆ ಆತ್ಮನ ಕಂಡವನದ ಪೇಳಬೇಕು, ಎಳೆಯಂಬ ರಾಯಗೆ ತುಳಿಯೆಂಬ ಮಂತ್ರಿ, ಲೇಸಿಂಗೆ ಕಾಲಿಗೆರಗಬಹುದು ಅರಸ, ಉದಾಸೀನಕೆ ಆರ್ ಎರಗುವರು? ಹೀಗೆ ಇವುಗಳು ಆಧುನಿಕ ಚುಟುಕುಗಳ ತಲೆವಣಿಗಳಾಗಿವೆ. ಹೀಗೆ ಲಕ್ಷ್ಮೀಶ, ಷಡಕ್ಷರಿ, ನರಹರಿ ಮೊದಲಾದ ಕವಿಗಳಲ್ಲಿಯು ಇಂತಹ ಅನೇಕ ಮಿಂಚಿನ ಕಿಡಿನುಡಿಗಳು ಕಾವ್ಯದುದ್ದಕ್ಕೂ ಬರುತ್ತದೆ.

ಹೊಸಗನ್ನಡದ ಮುಂಗೋಳಿ ಮುದ್ದಣನ ಸ್ವೋಪಜ್ಞಶೀಲವಾದ ಸಂವಾದದ ಮುಕ್ತಾಯವಂತು ಚುಟುಕು ಆಗಿದೆ.

"ಭವತಿ ಭಿಕ್ಷಾಂದೇಹಿ"
ಎಂಬುದಿದುವೆ ಕಬ್ಬಿಗರ್ಗೆ
ಸಿದ್ದಿಸಿದ ಪೆರ್ಮೆಯ.........
ಸಪ್ತಾಕ್ಷರೀ ಮಂತ್ರಂ. (ಚುಟುಕು ಸಾಹಿತ್ಯ ಪರಂಪರೆ ಹಾಗೂ
ಸಿ.ಪಿ.ಕೆ. ಚುಟುಕುಗಳ ಸಮೀಕ್ಷೆ, ಪು. ೮)

ಪುರಂದರ ಕನಕಾದಿ ದಾಸವರೇಣ್ಯರ ಕೀರ್ತನೆಗಳಲ್ಲಿ ಅದರಲ್ಲೂ ಮುಖ್ಯವಾಗಿ ಅವುಗಳ ಪಲ್ಲವಿ ಅನುಪಲ್ಲವಿ ಭಾಗಗಳು ಚುಟುಕುವಿನಂತೆ ಸಾರಸಂಗ್ರಹವಾಗಿ ಮನನಯೋಗ್ಯವಾಗಿ, ಸ್ಮೃತಿಗತವಾಗಿ ನಿಲ್ಲುತ್ತದೆ. ಅಲ್ಲಿದೆ ನಮ್ಮನೆ, ಇಲ್ಲಿ ಬಂದೆ ಸುಮ್ಮನೆ, ಅವರೆಕಾಯಿ ಬೇಕು, ಸಮಯದಲಿ ಅವರೆಕಾಯಿ ಬೇಕು, ಜಗದೋದ್ಧಾರನ ಮಗನೆಂದು ತಿಳಿಯುತ ಆಡಿಸಿದಳು ಯಶೋಧೆ, ಇಂಥ ನೂರಾರು ಪಲ್ಲವಿಗಳನ್ನು ಚುಟುಕುಗಳಂತೆ ಉದ್ಧರಿಸಬಹುದು.

ಕೇಶಿರಾಜನ ಶಬ್ದಮಣಿದರ್ಪಣದಲ್ಲಿಯು ಚುಟುಕುಗಳು ದೊರೆತಿದೆ. ದಯೆಯಿಲ್ಲದವನು ಕಣ್ಣೇಂ ಪುಣ್ಣೇಂ? ಪ್ರಾಯಂ ಕೂಸಾಡದೆ ಅಭಿಪ್ರಾಯ ಕೂಸುಕ್ಕುಮೆ? ಎನಿತ್ತೆ ನಿತ್ತಂಬುಜ ಪುತ್ರನೇತ್ರೆಯಾ....... ಹೀಗೆ ಅತ್ಯದ್ಭುತವಾದ ಈ ಮೇಲಿನ ಸಾಲುಗಳು ಚುಟುಕುಗಳಾಗಿವೆ.

**ಗಾದೆಗಳು:** ಜನಪದದ ಅನುಭವರೂಪವಾಗಿ ಗಾದೆಗಳು ಮೂಡಿ, ಸಂಸ್ಕಾರಗೊಂಡು, ತೀಡಿ ತಿದ್ದಿ ಒಂದು ಆಕಾರ ಪಡೆದುಕೊಂಡಿರಬಹುದು. ಅದಕ್ಕೊಂದು ಭಾವ ವಲಯವಿರುತ್ತದೆ. ಅದನ್ನು ಮಹಾಕವಿ ಸ್ವೀಕರಿಸಿ ಹೊಳಪುಗೊಡುತ್ತಾನೆ. ಅಥವಾ ಮಹಾಕವಿಯ ಕಿಡಿನುಡಿ ಗಾದೆ ಮಾತಾಗಿ ಪ್ರಸಾರವಾಗುತ್ತದೆ. ಆದ್ದರಿಂದ ಗಾದೆಗಳಲ್ಲಿ 'ಚುಟುಕು' ಸಾಧ್ಯತೆಯನ್ನು ಹುಡುಕುವುದು ವ್ಯರ್ಥವಾಗಲಾರದು.

- ಮಕ್ಕಳಿಲ್ಲದ ಮನೆ ಒಕ್ಕಲಿಲ್ಲದ ಊರು ಎಕ್ಕಡಕ್ಕಿಂತ ಕಡೆ[೧]
- ಅಜ್ಜಿ ನೂತಿದ್ದು ಅಜ್ಜನ ಉಡುದಾರಕ್ಕೆ ಸೈ
- ಆದಷ್ಟೇ ಆರಂಭ; ಹೂದಷ್ಟೆ ಮಳೆಗಾಲ
- ಬಿದ್ದಕಲ್ಲು ಅಗಸನದು, ಎದ್ದ ಕಲ್ಲು ಪೂಜಾರಿಯದು
- ಬಾಳೆ ಬಗೆದುಹಾಕು; ತೆಂಗು ತೇಲಿಹಾಕು
- ಹಿರಿಯ ಮಗನಾಗಬೇಡ, ಬಾಗಿಲ ಕದ ಆಗಬೇಡ

ಹೀಗೆ ಮೇಲಿನ ಗಾದೆಗಳಲ್ಲಿ ಅನುಭವದ ಗಣಿ ರತ್ನ ತುಂಬಿದ್ದು, ಚುಟುಕುಗಳಾಗಿ ಪರಿಣಮಿಸಿದೆ.

ಸಂಸ್ಕೃತ ಭಾಷೆಯಲ್ಲಿ ಚುಟುಕು ತನ್ನದೇ ಆದಂತಹ ನೆಲೆಯನ್ನು ಒಳಗೊಂಡಿದೆ. ಕಾಳಿದಾಸ, ಭಾರವಿ, ಭಾಸ, ಶೂದ್ರಕರ ಕಾವ್ಯಗಳಲ್ಲಿನ ಸಾರಭೂತವಾದ ವಾಕ್ಯಗಳು ಗಾದೆಗಳಂತೆ ಲೋಕಾಚಾರದಲ್ಲಿ ಬಳಕೆಯಾಗುತ್ತಿದೆ.

---

೧. "ಚುಟುಕು ಸಾಹಿತ್ಯ ಪರಂಪರೆ ಹಾಗೂ ಸಿಪಿಕೆ" ಚುಟುಕುಗಳ ಸಮೀಕ್ಷೆ, ಎ.ಎನ್.ಜಯರಾಂ, ಪು. ೧೧

- ಮಾತೃವತ್ ಪರದಾರೇಷು ಪರದ್ರವ್ಯೇಷು ಲೋಷ್ಟವತ್
  ಆತ್ಮಹತ್ ಸರ್ವಭೂತೇಷು, ಯಃ ಪಶ್ಯತಿ ಸ ಪಂಡಿತಃ

(ಚುಟುಕು ಸಾಹಿತ್ಯ ಪರಂಪರೆ ಹಾಗೂ
ಸಿ.ಪಿ.ಕೆ. ಚುಟುಕುಗಳ ಸಮೀಕ್ಷೆ, ಪು. ೧೩)

(ಪರಸ್ತ್ರೀಯರನ್ನು ತಾಯಿಯಂತೆ, ಪರಧನವನ್ನು ಮಣ್ಣಿನಂತೆ ಎಲ್ಲ ಜೀವಿಗಳನ್ನು ತನ್ನಂತೆ ಯಾರು ಭಾವಿಸುತ್ತಾರೋ ಅವನೆ ಪಂಡಿತ)

- ಉತ್ತಮಾ ಆತ್ಮನಾ ಖ್ಯಾತಾಃ ಪಿತ್ರು; ಖ್ಯಾತ್ಯಾಶ ಮಾಧ್ಯಮಾಃ।
  ಅಧಮಾಮಾತುಲಾತ್ ಖ್ಯಾತಾಃ ಶ್ವಶುರಾಚ್ಛಾಧ ಮಾಧಮಃ॥

(ಅದೇ)

(ತನ್ನಿಂದ ಖ್ಯಾತನಾದವನೇ ಉತ್ತಮನು; ತಂದೆಯಿಂದ ಖ್ಯಾತನಾದವನೆ ಅವನು ಮಧ್ಯಮನು; ಸೋದರ ಮಾವನಿಂದ ಖ್ಯಾತನಾದವನು ಅಧಮನು; ಮಾವನಿಂದ ಖ್ಯಾತನಾದವನೇ ಅಧಮರಲ್ಲಿ ಅಧಮ)

**ತಮಿಳು ಮತ್ತು ತೆಲುಗು ಭಾಷೆಗಳಲ್ಲಿ**

ಕನ್ನಡದಲ್ಲಿ ಸರ್ವಜ್ಞನು ಹೇಗೋ, ತಮಿಳಿನಲ್ಲಿ ತಿರುವಳ್ಳುವರ್, ತೆಲುಗಿನಲ್ಲಿ ಯೋಗಿ ವೇಮನನು ಹಾಗೇ ಸರ್ವಜ್ಞನ ವಚನಗಳು ತ್ರಿಪದಿಗಳಾದರೆ, ತಿರುವಳ್ಳುವರರ ಕುರುಳ್‌ಗಳು, ದ್ವಿಪದಿಗಳು, ವಾಮನನ ವಚನಗಳು, ಚೌಪದಿಗಳು. ಇವು ಮೂರು ನಾಲ್ಕು ಪಾದಗಳಾಚೆ ಚಾಚದಿರುವುದನ್ನು ಚುಟುಕುವಿನ ಹಿನ್ನೆಲೆಯಲ್ಲಿ ಅಗತ್ಯವಾಗಿ ಗಮನಿಸಬೇಕಾಗಿದೆ.

ತಿರುವಳ್ಳುವರ್‌ರವರ ತುಪ್ಪಾರ್ಕ್ಕುತ್ತುಪಾಯ ತುಪ್ಪಾಕ್ಕಿ ತುಪ್ಪಾರಾಕ್ಕು ತುಪ್ಪಾಯದೂ ಉಮ್‌ಮಳೈ.

(ಉಣ್ಣುವವರಿಗೆ ಬೇಕಾದ ಉಣಿಸನ್ನು ಬೆಳೆಯಲು ನೆರವಾಗುವುದು ಮಳೆ: ನೀರಡಿಸಿದವನಿಗೆ ಉಣವಾಗುವುದು ಮಳೆ).

ವೇಮನ ಯೋಗಿಯು ಸಮಾಜದ ವಿವಿಧ ಸ್ತರಗಳ ನೇರ ಪರಿಚಯವಿರುವ ಈತ ಬಂಡಾಯಗಾರ. ವಿಶಾಲವಾದ ಲೋಕಾನುಭವ ಮುಕ್ತ ವಿಚಾರಧಾರೆ, ನೇರ ನುಡಿಗಳಿಂದ ಈತ ಮಾನ್ಯನಾಗಿದ್ದಾನೆ.

**ಲೋಭಿದಾನಿ ಜಂಪ ಲೋಕಂಬು ಲೋಪಲ**
**ಮಂದುವೇರುವಲದು; ಮತಮೆಗಲದು**
**ಪೈಕಮಡುಗ ನತಡು ಭಗ್ಗರು ಮಿನಿಚಚ್ಚು**

(ಅದೇ, ಪು. ೧೫)

ಲೋಭಿಯನ್ನು ಕೊಲ್ಲಲು ಬೇರೆ ಮದ್ದು ಬೇಕಿಲ್ಲ; ಹಣ ಕೇಳಿದರೆ ಸಾಕು; ತಕ್ಷಣ ಎದೆಯೊಡೆದು ಸಾಯುತ್ತಾನೆ. ಇಲ್ಲಿನ ವಿಡಂಬನೆಗಳು ಆಧುನಿಕ ಚುಟುಕುಗಳಿಗೆ ಮಾದರಿಯಾಗಿದೆ.

ಹೀಗೆ ಒಟ್ಟಾರೆಯಾಗಿ ಶಾಸನ ಸಾಹಿತ್ಯದಿಂದ ತೊಡಗಿ ಮುದ್ದಣವರೆಗಿನ ಪ್ರಾಚೀನ ಸಾಹಿತ್ಯವನ್ನು ಸಿಂಹಾವಲೋಕಿಸಿದಾಗ ಕೆಲವು ಚುಟುಕುಗಳನ್ನು ಬೆದಕಿ ತೆಗೆಯಬಹುದು. ಅನೇಕ ಸಂದರ್ಭಗಳಲ್ಲಿ ಚುಟುಕುವಿನ ಮೂಲ ಮೃತ್ತಿಕೆಯನ್ನು ಗುರುತಿಸಬಹುದು.

ಹೀಗೆ ಆಧುನಿಕ ಚುಟುಕು ಸಾಹಿತ್ಯಕ್ಕೆ ಕನ್ನಡ, ಸಂಸ್ಕೃತ, ತಮಿಳು, ತೆಲುಗು, ಇಂಗ್ಲಿಷ್ ಭಾಷೆಗಳಲ್ಲದೆ ಇತರೆ ಭಾಷೆಗಳಲ್ಲೂ ಒಂದು ದೀರ್ಘ ಪರಂಪರೆ ಇರುವುದನ್ನು ಗಮನಿಸಬಹುದಾಗಿದೆ.

**ಚುಟುಕುವಿನ ಗುಣಲಕ್ಷಣಗಳು**

- ಚುಟುಕುವಿಗೆ ಒಂದು ಸೀಮಿತ ಬಾಹ್ಯರೂಪ ಇದೆ.
- ಚುಟುಕುವಿಗೆ ನಿರ್ದಿಷ್ಟವಾದ ನಡೆ ನಿಲುಗಡೆ ಇದೆ.
- ಚುಟುಕುವಿನಲ್ಲಿ ನೆನಪಿನಲ್ಲಿ ಉಳಿಯುವ ದೃಷ್ಟಿಯಿಂದ ಹಿತವಾದ ಪ್ರಾಸ ಸಾಂಗತ್ಯದ ಅಗತ್ಯವಿದೆ.
- ಚುಟುಕುವಿನಲ್ಲೇ ಪರ್ಯಾಪ್ತವಾದ, ಸ್ವತಂತ್ರವಾಗಿರುವ ಚಿಕ್ಕವೃತ್ತವಿದೆ.
- ಚುಟುಕು ಸಾಹಿತ್ಯ ಪರಾವಲಂಬಿ ಅಲ್ಲ.

**ಚುಟುಕುವಿನ ಮಹತ್ವ**

ಚುಟುಕು ಸಾಹಿತ್ಯವು ಉತ್ತಮ ಕಾವ್ಯದ ತಿರುಳನ್ನು ಹೊಂದಿದೆ. ಹಾಗಾಗಿ ಚಿಂತನಾಂಶ ಉತ್ತಮವಾಗಿದ್ದು, ಸೂಚನೆಗಳನ್ನು ಯಥಾವತ್ತಾಗಿ ನೀಡುತ್ತದೆ. ಚುಟುಕು ತನ್ನ ಒಡಲಿನಲ್ಲಿ ಬೆಟ್ಟದಷ್ಟು ಅರ್ಥವನ್ನು ಅಡಗಿಸಿಕೊಂಡಿದೆ. ಆದ್ದರಿಂದಲೇ ಚುಟುಕು ರಾಮಬಾಣದಂತೆ ಗುರಿ ನಿಲುಕುವ ಸಾಮರ್ಥ್ಯವನ್ನು ಹೊಂದಿದೆ. ಒಟ್ಟಾರೆಯಾಗಿ ಚುಟುಕುಗಳು ಮನುಷ್ಯನ ಜೀವನ ಧಾರೆಯನ್ನು ಹೊಂದಿದೆ ಎಂದು ಹೇಳಬಹುದಾಗಿದ್ದು, ಎಲ್ಲರನ್ನು ಆಕರ್ಷಿಸುವ ಚುಟುಕು ಇಂದಿನ ಯುಗದಲ್ಲಿ ತನ್ನದೇ ಆದಂತಹ ಮಹತ್ವವನ್ನು ಹೊಂದಿದೆ.

**ಚುಟುಕು : ಸ್ವರೂಪ ಮತ್ತು ವ್ಯಾಪ್ತಿ**

ಚುಟುಕು ಅಥವಾ ಹನಿಗವನ ಇದು ತುಂಬಾ ಪ್ರಚಾರವಾಗಿರುವ ಜನಪ್ರಿಯವೂ ಆಗಿರುವ ಸಾಹಿತ್ಯ ಪ್ರಕಾರವಾಗಿದೆ. ಇದರ ಪರಂಪರೆ ಪ್ರಾಚೀನವಾದುದಾಗಿದೆ. ಚುಟುಕು,

ಹನಿಗವನ ಎಂಬ ಹೆಸರುಗಳು ಸಮಾನಾರ್ಥಕವಾಗಿ ಬಳಕೆಗೊಳ್ಳುತ್ತಿವೆ. ಈ ಪ್ರಕಾರಕ್ಕೆ 'ಚುಟುಕು' ಎಂದು ನಾಮಕರಣ ಮಾಡಿದ ಜಿ.ಪಿ.ರಾಜರತ್ನಂ ಅವರೆ ಅದನ್ನು 'ಪುಟಾಣಿ' ಎಂದೂ ಕರೆದರು.

ಚುಟುಕುವಿನ ಪ್ರಾಚೀನ ಸಂಬಂಧಿ, ಸಂಸ್ಕೃತದ ಮುಕ್ತಕ. ಮುಕ್ತಕ ಎಂದರೆ ಬಿಡಿಯಾದುದು ಮುತ್ತು ಎಂಬ ಎರಡೂ ಅರ್ಥಗಳಿವೆ. ಆದ್ದರಿಂದಲೇ ತೀ.ನಂ.ಶ್ರೀಕಂಠಯ್ಯ ಅವರು ಅದನ್ನು ಬಿಡಿಮುತ್ತು ಎಂದು ಕರೆದಿದ್ದಾರೆ.

ಗ್ರೀಕ್ 'ಎಫಿಗ್ರಮ್', ಪರ್ಷಿಯನ್ 'ರುಬಾಯಿ', ಜಪಾನಿ 'ಹಾಯ್ಕು', ಚೀಣೀ 'ಟಂಕ', ಇಂಗ್ಲಿಷ್ ';ಒಮೆರಿಕ್' ಮುಂತಾದವು ಚುಟುಕುವಿನ ಗೋತ್ರಕ್ಕೆ ಸೇರಿದವು. ಹೀಗೆ ಕನ್ನಡದಲ್ಲಿ ಚುಟುಕು ರೂಪುಗೊಳ್ಳುವುದಕ್ಕೆ ಒಂದು ಕಡೆ ಮುಕ್ತಕದ, ಅದಕ್ಕೂ ಮಿಗಿಲಾಗಿ ಇನ್ನೊಂದು ಕಡೆ 'ಲಿಮೆರಿಕ್'ದ ಪ್ರಭಾವ ಕಾರಣ.

ಚುಟುಕು ಮೇಲುನೋಟಕ್ಕೆ ವಾಮನರೂಪಿ; ನಾಲ್ಕಾರು ಸಾಲುಗಳ ಮಿತಿಯಲ್ಲಿ ಇರತಕ್ಕದ್ದು. ಅದರೆ ಅದರ ಸತ್ವ ಸಾಧಾರಣವಾದುದಲ್ಲ, ಅಸಾಮಾನ್ಯವಾದುದಾಗಿದೆ.

ಚುಟುಕು ಪ್ರತಿಭೆಯಿಂದಲೇ ಹೊರಹೊಮ್ಮುತ್ತದೆ. ಆದರೆ ಹೀಗೆ ಹೇಳುವಾಗ "ಪ್ರತಿಭಾಕಾರತಮ್ಯೇನ ಪ್ರತಿಷ್ಠಾಭುವಿ ಭೂರಿದಾ"[೧] ಎಂಬ ರಾಜಶೇಖರನ ಉಕ್ತಿಯನ್ನು ಮರೆಯಬಾರದು. "ಕವಿತ್ವ ಬೀಜಂಪ್ರತಿಭಾನಂ" ಎಂಬುದು ವಾಮನನ ನುಡಿ. ಕೆಲವೊಮ್ಮೆ ಚುಟುಕು 'ಕವಿತ್ವ ಬೀಜವೂ' ಆಗಬಹುದು.

ಕನ್ನಡದಲ್ಲಿ ಪ್ರಾಚೀನಕಾಲದಿಂದಲೂ ಮುಕ್ತಕಸಾಹಿತ್ಯ ನಾನಾ ರೂಪದಲ್ಲಿ ಬೆಳೆದುಬಂದಿದೆ. ಈ ದಿಶೆಯಲ್ಲಿ ಸರ್ವಜ್ಞನ ವಚನಗಳು ತುಂಬ ಗಮನಾರ್ಹವಾದ ಚುಟುಕುಗಳು. ಕೆಲವು ತಣ್ಣನೆಯ ಹಣತೆಗಳು, ಮತ್ತೆ ಕೆಲವು ಸುಡುವ ಕೆಂಡಗಳು! ಭಾರತೀಯ ಸಮಾಜ ಇಂದಿಗೂ ಜಾತಿಕುಲಗಳ ಚಕ್ರವ್ಯೂಹದಿಂದ ಹೊರಬರಲಾರದೆ ತೊಳಲುತ್ತಿರುವಾಗ, ಸರ್ವಜ್ಞನ ಈ ಚುಟುಕು ಅತ್ಯಂತ ಉಪಾದೇಯ ಸಂದೇಶವಾಗಿದೆ.

**ಜಾತಿಹೀನನ ಮನೆಯ ಜ್ಯೋತಿ ತಾ ಹೀನವೆ**
**ಜಾತಿ ವಿಜಾತಿ ಎನಬೇಡ ದೇವನೊಲಿ**
**ದಾತನೇ ಜಾತ – ಸರ್ವಜ್ಞ**

ಆಧುನಿಕ ಕಾಲಕ್ಕೆ ಬಂದರೆ ಜಿ.ಪಿ.ರಾಜರತ್ನಂ ಬಹುಶಃ ಚುಟುಕು ಪಿತಾಮಹರು. ಇದು ಅವರ ಒಂದು ಪುಟಾಣಿ.

---

೧. "ಚುಟುಕು ಚಿಂತನ – ಕೌಸ್ತುಭ ಪ್ರಕಾಶನ, ೨೦೧೪, ಪು. ೩೩.

ಒಂದು ಚಿಕ್ಕ ಹುಳು
ನುಂಗಲೈದುಗಳು
ಅದರ ಸಿವುರು ಬಾಯ ಕದರಿ
ಕಣ್ಣುತುಂಬ ಅಳು (ಚುಟುಕು ಚಿಂತನ, ಪು. ೩೫)

ಇದು ಮಕ್ಕಳ ಪದ್ಯವಾದ್ದರಿಂದ ಅರ್ಥ ಇಲ್ಲಿ ಗೌಣ.

ಚುಟುಕುಗೆ ಒಂದು ಗಣ್ಯವಾದ ಸ್ಥಾನ ದೊರಕಿಸಿಕೊಟ್ಟವರು ದಿನಕರ ದೇಸಾಯಿ. ಅವರ ಚುಟುಕುಗಳಲ್ಲಿ ವಿಡಂಬನದ ಘಾಟು ಹೆಚ್ಚು. ರಾಜಕಾರಣಿಗಳನ್ನು ಅವರು ಆಷಾಢಭೂತಿತ್ವ ಭ್ರಷ್ಟಾಚಾರಗಳನ್ನು ಕಟುವಾಗಿ ಟೀಕಿಸುತ್ತಾರೆ. ದೇಸಾಯಿ, ಎಂ.ಅಕಬರ ಅಲಿ ಅವರದೂ ಬಹುತೇಕ ದೇಸಾಯಿ ವರ್ಗವೇ ಆಗಿದೆ. ಎಚ್.ಡುಂಡಿರಾಜ್ ಅವರಲ್ಲಿ ಶಬ್ದ ಚಮತ್ಕಾರ ಶ್ಲೇಷ, ವಿಪರೀತ; ಆದ್ದರಿಂದಲೇ ಅವರು ಹಾಸ್ಯವನ್ನು ಅನನ್ಯವಾಗಿ ಉಕ್ಕಿಸುತ್ತಾರೆ.

"ನಿಮ್ಮ ಕವನಗಳಿಗೆ ಸ್ಫೂರ್ತಿ
ನಿಮ್ಮ ಮಡದಿಯೇ?"
"ಹೌದು, ನಿಮ್ಮ ಮಡದಿ!" (ಚುಟುಕು ಚಿಂತನ, ಪು. ೩೬)

ಚಂಪಾ ಅವರ ಈ ಚುಟುಕುವೂ ಚಮತ್ಕಾರ ಜನ್ಯ ಹಾಸ್ಯಕ್ಕೊಂದು ನಿದರ್ಶನ.

"ಪ್ರಿಯತಮಾ ಪ್ರಿಯತಮಾ"
ಎನ್ನುತ್ತಿದ್ದವಳು
ಮತ್ತಾರೋ ಕೊರಳಿಗೆ
ತಾಳಿ ಬಿಗಿದಾಗ

"ಪ್ರಿಯತಮ್ಮ"
ಎನ್ನ ತೊಡಗಿದಳು! (ಚುಟುಕು ಚಿಂತನ, ಪು. ೩೬)

ಹೀಗೆ ವಿವಿಧ ಕವಿಗಳ, ಕವಯಿತ್ರಿಯರ ಕೈಯಲ್ಲಿ ವಿವಿಧ ವಿನ್ಯಾಸಗಳಲ್ಲಿ ಚುಟುಕು ವಿಕಾಸಗೊಳ್ಳುತ್ತಿದೆ.

ಚುಟುಕು ಪ್ರಕಾರಕ್ಕೆ ಪರಿಮಿತಿಗಳಿವೆ. ದಿಟ, ಆದರೂ ಅದರಲ್ಲಿ ಗಹನ ಗಂಭೀರವಾದುದನ್ನು ಸಾಧಿಸುವುದು ಅಶಕ್ಯವಲ್ಲ; ಬದುಕಿನ ಎಲ್ಲಾ ಮುಖಗಳನ್ನೂ, ಅನುಭವಗಳನ್ನೂ ಶೋಧಿಸುವುದು ಅಸಾಧ್ಯವಲ್ಲ. ಅಂತಹ ಕೆಲಸವನ್ನು ಮಾಡುತ್ತಿರುವವರು ವಿರಳ.

ಚುಟುಕುವಿನ ಇಂದಿನ ಪ್ರಚಾರ, ಪ್ರಸಾರ, ಪ್ರಕರ್ಷಗಳನ್ನು ನೋಡಿದರೆ, ಅನೇಕ ಹಿರಿಯ ಕವಿಗಳೂ ಚುಟುಕುದತ್ತ ವಾಲುತ್ತಿರುವುದನ್ನು ಗಮನಿಸಿದರೆ, ವಿರಾಮ ವಿರಳವಾದ

ಆಧುನಿಕ ಜೀವನದ ಸಮಸ್ಯೆಗಳನ್ನು ಪರಿಭಾವಿಸಿದರೆ, ಚುಟುಕುವೇ ನಮ್ಮ 'ಭವಿಷ್ಯತ್ಕಾವ್ಯ'ವಾಗ ಬಹುದೆಂಬ ಅನುಮಾನ ಹುಟ್ಟುತ್ತದೆ. ಒಟ್ಟಾರೆ ಚುಟುಕು, ಸಾಹಿತ್ಯದ ಒಂದು ಅಂಗ, ಪ್ರಶಸ್ತವಾದ ಅಂಗ. ಅದು ಸಾಹಿತ್ಯವಲ್ಲ ಎಂದು ಯಾರಾದರೂ ವಾದಿಸಿದರೆ ಅಂತಹ ವಾದ ಅತಿರೇಕ ಮತ್ತು ಅವಿವೇಕವಾಗುತ್ತದೆ. ಚುಟುಕು ಸರ್ವಶ್ರೇಷ್ಠ ಪ್ರಕಾರ ಎಂದು ಅದನ್ನು ವೈಭವೀಕರಿಸಿದರೆ ಹೇಗೊ ಹಾಗೆ! ಕಲಾ ಪ್ರಪಂಚದಲ್ಲಿ ಬೆಳ್ಗೊಳದ ಗೊಮ್ಮಟನಿಗಿರುವಂತೆ ಬೇಲೂರಿನ ಶಿಲಾಬಾಲಕಿಯರಿಗೂ ಸ್ಥಾನ ಉಂಟೇ ಉಂಟಲ್ಲವೆ?[೧] ಆದರೆ ಆ ಸ್ಥಾನ ಮತ್ತು ಮಾನ ಒಂದೇ ಅಲ್ಲದಿರಬಹುದು. ಹೀಗೆ ಚುಟುಕು ತನ್ನದೇ ಆದಂತಹ ಸ್ವರೂಪ ಮತ್ತು ವ್ಯಾಪ್ತಿಯನ್ನು ಹೊಂದಿದೆ.

---

೧. "ಚುಟುಕು ಚಿಂತನ – ಕೌಸ್ತುಭ ಪ್ರಕಾಶನ, ೨೦೧೪, ಪು. ೩೯.

# ಅಧ್ಯಾಯ – ೩

# ಡಾ. ಸಿ.ಪಿ.ಕೆ. ಅವರ ಬದುಕು – ಬರೆಹ

ಸಿ.ಪಿ.ಕೆ. ಎಂಬ ಕಾವ್ಯನಾಮದಿಂದ ನಾಡಿನಾದ್ಯಂತ ಪ್ರಸಿದ್ಧವಾಗಿರುವ ಡಾ. ಸಿ.ಪಿ.ಕೃಷ್ಣಕುಮಾರ್ ಕನ್ನಡ ಸಾಹಿತ್ಯ ಲೋಕವನ್ನು ವಿವಿಧ ಆಯಾಮಗಳಿಂದ ಸಂಪದ್ಭರಿತವನ್ನಾಗಿಸಿದರು. 'ಹೊಸಗನ್ನಡ ಗದ್ಯ ನಿರ್ಮಾಪಕರಲ್ಲಿ ಒಬ್ಬರಾಗಿರುವ ಇವರು ೮–೪–೧೯೩೯ರಂದು ಕೆ.ಆರ್.ನಗರ ತಾಲ್ಲೂಕಿನ ಸಾಲಿಗ್ರಾಮ ಹೋಬಳಿಯ ಚಿಕ್ಕನಾಯಕನಹಳ್ಳಿ ಎಂಬ ಗ್ರಾಮದಲ್ಲಿ ಹುಟ್ಟಿದರು. ಇವರ ತಂದೆ ಪುಟ್ಟೇಗೌಡ, ತಾಯಿ ಚಿಕ್ಕಮ್ಮ. ಇವರ ಪ್ರಾಥಮಿಕ ಮತ್ತು ಪ್ರೌಢಶಾಲಾ ವಿದ್ಯಾಭ್ಯಾಸ ಚಿಕ್ಕನಾಯಕನಹಳ್ಳಿ ಮತ್ತು ಸಾಲಿಗ್ರಾಮದಲ್ಲಿ ನಡೆಯಿತು. ಮಗುವಾಗಿರುವಾಗಲೇ ತಾಯಿಯ ವಾತ್ಸಲ್ಯದಿಂದ ವಂಚಿತರಾಗಿ ಸಿಪಿಕೆ ಅವರು ಅಜ್ಜಿ ಮತ್ತು ಸೋದರತ್ತೆಯ ಆರೈಕೆಯಲ್ಲಿ ಬೆಳೆದರು. ಬಾಲ್ಯದಲ್ಲಿಯೇ ತೀಕ್ಷ್ಣಮತಿಯಾಗಿದ್ದ ಅವರಿಗೆ ಲಭಿಸಿದ ಪರಿಸರ ಅವರಲ್ಲಿದ್ದ ಹುಟ್ಟು ಪ್ರತಿಭೆಗೆ ಪೂರಕವಾಗಿದೆ.

ಸಾಹಿತ್ಯ ಕ್ಷೇತ್ರದಲ್ಲಿ ಸಿಪಿಕೆ ಎಂಬ ಮೂರಕ್ಷರಕ್ಕೆ ಸಾಹಿತ್ಯದಲ್ಲಿ ತ್ರಿವಿಕ್ರಮತ್ವವಿದೆ. ವಾಮನಶಕ್ತಿಯ ವಿಕಸನವಿದೆ. ಆದ್ದರಿಂದ ಸಿಪಿಕೆ ಜಡವಲ್ಲ; ನಿತ್ಯ ಕ್ರಿಯಾಶೀಲತೆಯ ಸಾಹಿತ್ಯ ಜಂಗಮ. ಇದನ್ನು ವಿಸ್ತರಿಸಿದರೆ ಚಿಕ್ಕನಾಯಕನಹಳ್ಳಿ ಪುಟ್ಟೇಗೌಡ ಕೃಷ್ಣಕುಮಾರ್ ಎಂದಾಗುತ್ತದೆ. ಆದರೂ CPK = Creative Power of Kannada[೧] ಎಂದೂ ಅರ್ಥೈಸಬಹುದಾಗಿದೆ.

ಡಾ. ಸಿ.ಪಿ.ಕೆ ತಾವು ಹುಟ್ಟಿದ ಹಳ್ಳಿಯ ಮೊದಲ ವಿದ್ಯಾವಂತರೆನಿಸಿಕೊಂಡ ಅವರ ತಂದೆ ಸಾಹಿತ್ಯಾಸಕ್ತರಾಗಿದ್ದುದು ಇವರಿಗೆ ಸಹಜ ಪ್ರೋತ್ಸಾಹ ದೊರಕುವಂತಾಯಿತು. ತಮ್ಮ ತಂದೆಯ ಬಗ್ಗೆ ಅನನ್ಯ, ಪ್ರೇಮ ಗೌರವ ಇಟ್ಟುಕೊಂಡಿದ್ದ ಅವರು ತಮ್ಮ ತಂದೆಯ ಬಗ್ಗೆ ಈ ರೀತಿ ಹೇಳಿಕೊಂಡಿದ್ದಾರೆ. "ಅವರು ದೇವತಾ ಮನುಷ್ಯರು ಎಂದು ಕರೆಯಬಹುದಾದ ಚೇತನ. ಸ್ಥಿತಪ್ರಜ್ಞರಂತೆ ಬದುಕಿದವರು. ನನ್ನಲ್ಲಿ ಏನಾದರೂ ಒಳ್ಳೆಯ ಗುಣವಿದ್ದರೆ ಅದು ಆ ತಂದೆಯಿಂದ ಬಂದದ್ದು. ದೋಷಗಳು ನನ್ನವೇ (ಅವು ಮತ್ತಾರೋ ಪೂರ್ವಿಕರಿಂದ ಬಂದಿರಬಹುದು)" ಎನ್ನುತ್ತಾ, ಆ ತಂದೆಗೆ ತಾನು ತಕ್ಕನಾದವನಾದೆನೇ ಎಂದು ಒಮ್ಮೊಮ್ಮೆ ಆತ್ಮವಿಮರ್ಶೆ ಮಾಡಿಕೊಂಡಿದ್ದಾರೆ.

ಓದಿನಲ್ಲಿ ಇವರು ಹೊಂದಿದ್ದ ಆಸಕ್ತಿ, ಅವರು ಕಲಿಯುತ್ತಿದ್ದ ಪ್ರಾಥಮಿಕ ಶಾಲೆಯ ಗ್ರಂಥಭಂಡಾರ, ಸಾಹಿತ್ಯಾಸಕ್ತಿಯನ್ನು ಬೆಳೆಸುವಲ್ಲಿ ಪ್ರಮುಖವಾದ ಪಾತ್ರವಹಿಸಿದೆ. 'ಒಬ್ಬ

---

೧. ಸರಸತಿಯ ವರಪುತ್ರ – ಸಂವಹನ ಪ್ರಕಾಶನ, ೨೦೦೯, ಪು. ೧೬.

ಲೇಖಕನಾಗಬೇಕು, ಹಲವು ಪುಸ್ತಕಗಳನ್ನು ಬರೆಯಬೇಕು' ಎಂಬ ಕನಸು ಚಿಗುರಲು ಪೂರಕವಾದ ವಾತಾವರಣ ಅದಾಗಿತ್ತು ಎಂದು ಸ್ಮರಿಸಿಕೊಂಡಿದ್ದಾರೆ. ಆ ಗ್ರಂಥಭಂಡಾರಕ್ಕೆ ಬರುತ್ತಿದ್ದ 'ಪುಸ್ತಕ ಪ್ರಪಂಚ', 'ಪ್ರಜಾಮತ' ಅಂದಿನ ಅವರ ಅಚ್ಚುಮೆಚ್ಚಿನ ಪತ್ರಿಕೆಗಳಾಗಿದ್ದವು. ಎಸ್.ಎಸ್.ಎಲ್.ಸಿ.ಯಲ್ಲಿ ಇರುವಾಗಲೇ ಆಂಗ್ಲಪಠ್ಯಪುಸ್ತಕದಲ್ಲಿದ್ದ ಕವನವನ್ನು ಕನ್ನಡಕ್ಕೆ ಭಾಷಾಂತರಿಸಿದ ಸಿ.ಪಿ.ಕೆ. ಅವರು ಎಲ್ಲೂ ಪ್ರಕಟವಾಗದ ಆ ಭಾಷಾಂತರ ಕವನವನ್ನು ತಮ್ಮ ಪ್ರಥಮ ಸಾಹಿತ್ಯ ರಚನೆಯೆಂಬುದಾಗಿ ಸ್ಮರಿಸಿಕೊಂಡಿದ್ದಾರೆ.

ಮಾಧ್ಯಮಿಕ ಶಾಲೆಯಲ್ಲಿದ್ದಾಗ ಅವರ ಕುಟುಂಬದ ಸದಸ್ಯರೊಬ್ಬರು ಮಾಡಿದ ಮೋಸದಿಂದಾಗಿ ದಾರಿದ್ರ್ಯದ ದಿನಗಳನ್ನು ಎದುರಿಸಬೇಕಾಯಿತು. ಮನೆತನದ ಆಸ್ತಿ ವ್ಯವಹಾರಗಳು ಕೋರ್ಟು ಕಛೇರಿಯ ಮೆಟ್ಟಿಲು ಹತ್ತಿ ಮನೆಯಲ್ಲಿ ಬಡತನ ತಾಂಡವವಾಡುತ್ತಿದ್ದಾಗ ಸಿ.ಪಿ.ಕೆ. ಅವರ ವಿದ್ಯಾಭ್ಯಾಸಕ್ಕೆ ಆಸರೆಯಾಗಿ ನಿಂತ ಆಶ್ರಯದಾತರೆಂದರೆ ಪ್ರೊ. ದೇ. ಜವರೇಗೌಡರು ಇವರ ನೆರವನ್ನು ಕೃತಜ್ಞತಾ ಭಾವದಿಂದ ಸಿ.ಪಿ.ಕೆ. ಅವರು ಸ್ಮರಿಸಿಕೊಳ್ಳುತ್ತಾರೆ.

ಬದುಕಿನಲ್ಲಿ ಶಿಸ್ತಿಗೆ ಆದ್ಯತೆ ಕೊಡುವ ಲೇಖಕರು ಅಸ್ತವ್ಯಸ್ತತೆಗೆ ಎಂದೂ ಅವಕಾಶ ನೀಡುವುದಿಲ್ಲ. ಈ ಗುಣಗಳೇ ಅವರ ಯಶಸ್ವೀ ಬದುಕಿನ ಒಳಗುಟ್ಟು ಎಂದು ಹೇಳಿದರೆ ತಪ್ಪಾಗಲಾರದು. ತಮ್ಮ ಬದುಕು ಹಾಗೂ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳನ್ನು ಅವರು ಸ್ಮರಿಸಿಕೊಂಡಿದ್ದಾರೆ. ಇವರ ಪ್ರಾಥಮಿಕ ಶಾಲೆಯ ಉಪಾಧ್ಯಾಯರು, ಮುಖ್ಯೋಪಾಧ್ಯಾಯರಾಗಿದ್ದ ದೇವೆಗೌಡರು. ದೇವೆಗೌಡರು ಅಜ್ಜಿಯ ಸಂಬಂಧಿಕ-ರಾಗಿದ್ದರಂತೆ ಅವರು ಬೆತ್ತದ ಏಟು ಕೊಡುತ್ತಿದ್ದುದನ್ನು ಸ್ಮರಿಸಿ, ಎಲ್ಲಾ ವಿಷಯಗಳಲ್ಲೂ ತಾನು ಬುದ್ಧಿವಂತನಾಗಿದ್ದೆ ಎಂದು ಹೇಳಿದ್ದಾರೆ. ಇವರು ಯಾವುದೇ ಜಾತಿ-ಭೇದದ ಪ್ರಭಾವಕ್ಕೆ ಒಳಗಾಗದೆ ಇದ್ದುದರಿಂದ ಚದುರಂಗರವರೇ ಒಂದೆಡೆ ಲೇಖಕರನ್ನು ಕುರಿತು "ಸಿ.ಪಿ.ಕೆ. ಅವರದು ಜಾತಿ ಹಾಗೂ ಪಂಥಗಳಿಂದ ಮುಕ್ತವಾದ ಮನಸ್ಸು" ಎಂದು ಹೇಳಿರುವ ಮಾತು ಜಾತ್ಯಾತೀತ ಮನೋಭಾವಕ್ಕೆ ಹಿಡಿದ ಕನ್ನಡಿಯಾಗಿದೆ.

ತಮ್ಮ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಣವನ್ನು ಸ್ವಂತ ಹಳ್ಳಿಯಲ್ಲಿ ಪೂರೈಸಿ ಮುಂದಿನ ವ್ಯಾಸಂಗಕ್ಕಾಗಿ ಶಿವಮೊಗ್ಗೆಯ ಇಂಟರ್ ಮೀಡಿಯೆಟ್ ಕಾಲೇಜನ್ನು ಸೇರಿದ ಸಿ.ಪಿ.ಕೆ. ಅವರಿಗೆ ಸಿಕ್ಕಿದ ಅಧ್ಯಾಪಕ ವೃಂದದವರು ಅವರ ವ್ಯಕ್ತಿತ್ವವನ್ನು ಇನ್ನಷ್ಟು ಬೆಳೆಸುವಲ್ಲಿ ಸಹಾಯಕರಾದರು. ಕನ್ನಡ ಅಧ್ಯಾಪಕರಾಗಿ ಜಿ.ಎಸ್. ಶಿವರುದ್ರಪ್ಪರವರು ಸ್ಫೂರ್ತಿ ನೀಡಿದರು. ನವ್ಯಕಾವ್ಯವನ್ನು ಪರಿಚಯಿಸಿದ ಯು.ಆರ್. ಅನಂತಮೂರ್ತಿಯವರು ಇಂಗ್ಲಿಷ್ ಪ್ರಾಧ್ಯಾಪಕರಾಗಿ ದೊರೆತರು.

ಶಿವಮೊಗ್ಗೆಯಲ್ಲಿ ಇವರು ಇಂಟರ್ ಮೀಡಿಯೇಟ್ ಶಿಕ್ಷಣವನ್ನು ಮುಗಿಸಿ, ಅನಂತರ ಮೈಸೂರು ಮಹಾರಾಜ ಕಾಲೇಜಿನಿಂದ ಕನ್ನಡದಲ್ಲಿ ಬಿ.ಎ. ಆನರ್ಸ್ ಪದವಿಯನ್ನೂ, ಮಾನಸಗಂಗೋತ್ರಿಯಿಂದ ಎಂ.ಎ. ಪದವಿಯನ್ನೂ ಪಡೆದರು. ಆನರ್ಸ್, ಎಂ.ಎ. ಎರಡರಲ್ಲೂ ಅವರದು ಪ್ರಥಮದರ್ಜೆ ಮತ್ತು ಪ್ರಥಮಶ್ರೇಣಿಯಾಗಿದೆ. ಇವರು ೧೯೭೪ರಲ್ಲಿ 'ನಾಗವರ್ಮನ ಕರ್ನಾಟಕ ಕಾದಂಬರಿ ಒಂದು ತೌಲನಿಕ ಮತ್ತು ವಿಮರ್ಶಾತ್ಮಕ ಅಧ್ಯಯನ' ಎಂಬ ಮಹಾಪ್ರಬಂಧ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ. ಭಾರತೀಯ ವಿದ್ಯಾಭವನದ ಸಂಸ್ಕೃತ ಕೋವಿದ ಪದವಿ ಕೂಡ ಇವರಿಗೆ ಲಭಿಸಿದೆ.

ಸಿ.ಪಿ.ಕೆ. ಅವರು ೧೯೬೧ರಿಂದ ೧೯೬೪ರವರೆಗೆ ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಸಂಶೋಧನ ಸಹಾಯಕರಾಗಿ ಕೆಲಸಮಾಡಿ, ಅನಂತರ ಮಹಾರಾಜ ಕಾಲೇಜಿನಲ್ಲಿ ಮೂರುವರ್ಷ ಕನ್ನಡ ಅಧ್ಯಾಪಕರಾಗಿ ಸೇವೆಸಲ್ಲಿಸಿದರು. ೧೯೬೭ರಲ್ಲಿ ಅವರು ಮಾನಸಗಂಗೋತ್ರಿಯಲ್ಲಿ ಅಧ್ಯಾಪಕರಾಗಿ ನೇಮಕಗೊಂಡು, ೧೯೬೯ರಲ್ಲಿ ರೀಡರ್ ಆದರು. ಆ ಹುದ್ದೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಹದಿಮೂರು ವರ್ಷ ಸೇವೆ ಸಲ್ಲಿಸಿ, ೧೯೮೦ರಲ್ಲಿ ಅಲ್ಲೇ ಪ್ರಾಧ್ಯಾಪಕರಾಗಿ ನೇಮಕಗೊಂಡು, ೧೯೯೯ರಲ್ಲಿ ನಿವೃತ್ತರಾದರು. ಈ ನಡುವೆ ಅವರು ಎರಡು ವರ್ಷ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿಯೂ ಕೆಲಸ ಮಾಡಿದರು. ಹದಿನೆಂಟು ವರ್ಷ ಮೈಸೂರು ವಿಶ್ವವಿದ್ಯಾನಿಲಯದ ಶಿಕ್ಷಣ ಮಂಡಳಿಯ ಸದಸ್ಯರೂ ಮೂರು ವರ್ಷ ಸೆನೆಟ್ ಸದಸ್ಯರೂ ಮುಂದೆ ಒಂದು ವರ್ಷ ಸಿಂಡಿಕೇಟ್ ಸದಸ್ಯರೂ ಆಗಿದ್ದರು.

ನಿವೃತ್ತಿಯ ನಂತರ ಅವರು ಒಂದು ವರ್ಷ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕುವೆಂಪು ಕಾವ್ಯಾಧ್ಯಯನ ಪೀಠದ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಗ್ರಂಥಪ್ರಕಟಣೆ ಸಮಿತಿಯ ಅಧ್ಯಕ್ಷರಾಗಿ, 'ಪ್ರಬುದ್ಧ ಕರ್ನಾಟಕ' ಪತ್ರಿಕೆಯ ಸಂಪಾದಕರಾಗಿ, 'ಪುಸ್ತಕ ಪ್ರಪಂಚ' ಪತ್ರಿಕೆಯ ಸಂಪಾದಕ ಮಂಡಲಿ, ಸಮಗ್ರ ವಚನ ಸಂಪುಟಗಳ ಸಂಪಾದಕ ಮಂಡಲಿ, ರಾಜ್ಯ ಗ್ರಂಥಾಲಯ ಇಲಾಖೆಯ ಪುಸ್ತಕ ಆಯ್ಕೆ ಉನ್ನತ ಸಮಿತಿ, ಪಂಪ ಪ್ರಶಸ್ತಿ ಸಮಿತಿ, ಕರ್ನಾಟಕ ವಿಶ್ವವಿದ್ಯಾನಿಲಯದ ಕನಕಪೀಠದ ಸಲಹಾ–ಸಮಿತಿ ಇತ್ಯಾದಿಗಳ ಸದಸ್ಯರಾಗಿ ಸಿ.ಪಿ.ಕೆ. ಸೇವೆ ಸಲ್ಲಸಿದ್ದಾರೆ. ಅವರು ಸ್ವಲ್ಪಕಾಲ ಮೈಸೂರಿನ ಜ್ಞಾನೋದಯ ಪರಿಷತ್ತಿನ ಹಾಗೂ ವಿವೇಕ ಜಾಗೃತ ಬಳಗದ ಗೌರವಾಧ್ಯಕ್ಷರಾಗಿದ್ದರು.

ಸಿ.ಪಿ.ಕೆ. ಮೂಲತಃ ಉತ್ತಮ ಕವಿ. ಈ ಸೃಜನಶೀಲಕ್ರಿಯೆ ಅವರನ್ನು ಅಕಾಡೆಮಿಕ್ ಛಾಪಿನಿಂದ ಪಾರುಮಾಡಿದೆ. ಅವರ ವಿಮರ್ಶಾಕೃತಿ ಬಾಹುಳ್ಯ ಅವರನ್ನು ಈ ಅಕಾಡೆಮಿಕ್

ಆವರಣಕ್ಕೆ ಒಳಗು ಮಾಡಿದರೂ ಸಹ ಅದನ್ನು ಮೀರಿದ ಕಾವ್ಯ, ಪ್ರಬಂಧ, ಜೀವನ ಚರಿತ್ರೆ ಮುಂತಾದ ಸೃಜನಶೀಲ ಬರವಣಿಗೆಗಳು ಸಾಹಿತ್ಯದಲ್ಲಿ ಸಾರ್ವತ್ರಿಕ ವ್ಯಾಪ್ತಿಯನ್ನು ತಂದುಕೊಟ್ಟಿವೆ.

ರಾಜ್ಯಮಟ್ಟದ ಮತ್ತು ರಾಷ್ಟ್ರಮಟ್ಟದ ಹಲವಾರು ವಿಚಾರಸಂಕಿರಣಗಳಲ್ಲಿ, ಕಮ್ಮಟಗಳಲ್ಲಿ ಮತ್ತು ಕವಿಗೋಷ್ಠಿಗಳಲ್ಲಿ ಸಿ.ಪಿ.ಕೆ. ಭಾಗವಹಿಸಿದ್ದಾರೆ. ಇವರು ಶಿವಮೊಗ್ಗೆಯಲ್ಲಿ ನಡೆದ ಅಖಿಲ ಭಾರತ ೪೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಾಂತರ ಗೋಷ್ಠಿಯ ಅಧ್ಯಕ್ಷರಾಗಿದ್ದರು. ೧೯೭೧ರಲ್ಲಿ ನಾಗಮಂಗಲದಲ್ಲಿ ನಡೆದ ಜಾನಪದ ಸಮ್ಮೇಳನದ ಸಾಹಿತ್ಯಗೋಷ್ಠಿಯ ಅಧ್ಯಕ್ಷರಾಗಿದ್ದರು. ೧೯೯೦ರಲ್ಲಿ ನಡೆದ ತಿ.ನರಸೀಪುರ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಅದೇ ವರ್ಷ ಜರುಗಿದ ಮಂಡ್ಯಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ೧೯೯೪ರಲ್ಲಿ ಮಂಡ್ಯದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆ, ೧೯೯೭ರಲ್ಲಿ ಗುಂಡ್ಲುಪೇಟೆಯಲ್ಲಿ ನಡೆದ ಮೈಸೂರು ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಇವೇ ಮುಂತಾದ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದು ಸಿ.ಪಿ.ಕೆ. ಅವರ ಪಾಲಿಗೆ ಬಂದಂತಹ ಗೌರವಗಳಾಗಿವೆ. ಲಕ್ನೋದಲ್ಲಿ ನಡೆದ ೧೯೯೪ರ ಅಖಿಲ ಭಾರತ ಗಣರಾಜ್ಯೋತ್ಸವ ಕವಿಗೋಷ್ಠಿಯಲ್ಲಿ ಅವರು ಕನ್ನಡವನ್ನು ಪ್ರತಿನಿಧಿಸಿದ್ದರು.

ಕನ್ನಡ ಸಾಹಿತ್ಯ ಪರಿಷತ್ತು ತನ್ನ ವಜ್ರಮಹೋತ್ಸವ ಸಂದರ್ಭದಲ್ಲಿ ಸಿ.ಪಿ.ಕೆ. ಅವರನ್ನು ಭಾಷಾಂತರ ಕ್ಷೇತ್ರದಲ್ಲಿ ಅವರು ಸಲ್ಲಿಸಿದ ಸೇವೆಗಾಗಿ ಸನ್ಮಾನಿಸಿತು. ೧೯೯೧ರಲ್ಲಿ ದಾವಣಗೆರೆಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲೂ ರಾಯಚೂರಿನಲ್ಲಿ ಜರುಗಿದ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದಲ್ಲೂ ಅವರು ಸನ್ಮಾನಗೊಂಡರು.

ಸಿ.ಪಿ.ಕೆ. ಅವರದು ಮೂರು ಬಗೆಯ ಕಾವ್ಯ: ೧. ಭಾವಗೀತೆ ೨. ಹನಿಗವನ ಮತ್ತು ಮುಕ್ತಕ ೩. ವಚನಗಳು.

ಈ ಮೂರೂ ಪ್ರಕಾರಗಳಲ್ಲಿ ಅವರು ತಮ್ಮ ವ್ಯಕ್ತಿತ್ವದ ಛಾಪನ್ನು ಒತ್ತಿದ್ದಾರೆ. ೧೯೬೦ರಲ್ಲಿ ಆರಂಭವಾದ ಅವರ ಕಾವ್ಯಕೃಷಿ ೨೦೦೯ರವರೆಗೆ ನಿರಂತರವಾಗಿ ನಡೆದುಬಂದಿದೆ. ಯಾವ ಕಾವ್ಯಪಂಥಕ್ಕೂ ಒಳಗಾಗದೆ, ಹೊರಗೂ ಆಗದೆ ಒಂದು ತೆರನಾದ ಸಮನ್ವಯ ಪಥದಲ್ಲಿ ಅಂದಂದಿನ ಬದುಕಿಗೆ ಅಭಿವ್ಯಕ್ತಿಯ ಬಿಂಬವಾಗಿ ನಿಂದರು. ಸಿ.ಪಿ.ಕೆ. ಬುದ್ಧಿಯ ಬೆವರು ಹರಿಸಿದ ಲೇಖಕರು. ಅವರ ಅಸಾಧಾರಣ ಪ್ರತಿಭೆ ಬುದ್ಧಿಯನ್ನು ನಿರಂತರ ದುಡಿಮೆಗೆ ಒಡ್ಡಿತು. ಹೀಗಾಗಿ ಪುಂಖಾನುಪುಂಖವಾಗಿ ಒಂದರ ಮೇಲೊಂದರಂತೆ ಕೃತಿಗಳು ಹೊರಹೊಮ್ಮಿದವು. ಹಾಗೆ ಹೊರಹೊಮ್ಮಿದ ಪ್ರತಿಕೃತಿಯಲ್ಲೂ ಗುಣಮಟ್ಟವನ್ನು

ಕಾಯ್ದುಕೊಂಡದ್ದು ಇವರ ಪ್ರತಿಭೆಯ ಔನತ್ಯವನ್ನು ಎತ್ತಿತೋರುತ್ತದೆ. ಲಯಸಮನ್ವಿತವಾದ ಲಲಿತ ಪದಗಳ ಬಳಕೆ ಭಾಷಾವರ್ಚಸ್ಸಿನಿಂದ ಕೂಡಿದ್ದು ಕಾವ್ಯ-ನಿರ್ಮಿತಿಯಲ್ಲಿ ರಮಣೀಯತೆಯ ತೇಜಸ್ಸಿಗೆ ಕಾರಣವಾಗುತ್ತದೆ.

**'ಹಗಲಿನ ವಾಚ್ಯವಾಗದಿರು ಹೆಣ್ಣೆ,**
**ಚಂದ್ರತಾರಾಖಚಿತ ಧ್ವನಿಗಂಭೀರ ರಾತ್ರಿಯಾಗು'** (ಸರಸತಿಯ ವರಪುತ್ರ, ಪು. ೧೭)

ಎಂಬ ಕಾವ್ಯ ಪಂಕ್ತಿಗಳು ಕವಿಯ ಕಾವ್ಯಶಕ್ತಿಯ ಹಿರಿಮೆಗೆ ಉಜ್ವಲ ಸಂಕೇತವಾಗಿವೆ. ವಸ್ತು ಯಾವುದೇ ಇರಲಿ, ವ್ಯಕ್ತಿ ಚಿತ್ರಗಳೇ ಆಗಲಿ ಅಲ್ಲೆಲ್ಲ ಕವಿಯ ಸ್ವೋಪಜ್ಞತೆ ಎದ್ದುಕಾಣುತ್ತದೆ. ಕನಕದಾಸರನ್ನು ಕುರಿತ ಇವರ ಕವಿತಾ ಚಿತ್ರ ಇಂತಿದೆ.

**ಇದು ಕನಕ: ಅಂದಿಗೂ ಇಂದಿಗೂ ಮುಂದೆಯೂ**
**ತೇಜಗುಂದದ, ಕೆಡದಮೂಲ್ಯ ಅಪ್ಪಟಲೋಹ!**
**ಕುರುಬನಿವನಂತೆ; ದಿಟ, ನಾವು ಕುರಿಗಳು, ಇವನು**
**ನಮ್ಮ ಕಾಯುವ ಕುರುಬ ದಾರಿತಪ್ಪದ ಹಾಗೆ!**

(ಸರಸತಿಯ ವರಪುತ್ರ, ಪು. ೧೮)

ಅದ್ಭುತವಾದ ಆಲೋಚನಾ ಶಕ್ತಿ ಇವರ ಕಾವ್ಯದ ತಿರುಳು; ಉತ್ತಮ ಚಿಂತನೆ ಇವರ ಕವಿತೆಗಳ ಅಂತಃಶಕ್ತಿಯ ಹರಳು.

ವಿದ್ಯಾರ್ಥಿದೆಸೆಯಲ್ಲೇ ತಮ್ಮೊಂದು ಕವನಕ್ಕಾಗಿ 'ಶ್ರೀ' ಯವರ ರಜತೋತ್ಸವ ಸುವರ್ಣ ಪದಕಗಳನ್ನು ಗಳಿಸಿದ ಸಿ.ಪಿ.ಕೆ. ತಮ್ಮ ಅನೇಕ ಪುಸ್ತಕಗಳಿಗಾಗಿ ರಾಜ್ಯಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ರಾಜ್ಯ ಸಾಹಿತ್ಯ ಅಕಾಡೆಮಿ, ಮೈಸೂರು ವಿಶ್ವವಿದ್ಯಾನಿಲಯ ಇಲಕಲ್ಲು ಮಠ, ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ವಚನಸಾಹಿತ್ಯ ಅಕಾಡೆಮಿ ಮುಂತಾದವುಗಳ ಬಹುಮಾನಗಳನ್ನು ಗಳಿಸಿದ್ದಾರೆ.

ಸಿ.ಪಿ.ಕೆ. ಅವರ 'ವಚನವಿಲೋಕನ' ಕೃತಿಗೆ ಬಸವವೇದಿಕೆಯ 'ಬಸವ ಸಾಹಿತ್ಯ ಶ್ರೀ' ಪುರಸ್ಕಾರ ಹಾಗೂ ಕಾವ್ಯಾನಂದ ಪುರಸ್ಕಾರ ಲಭಿಸಿವೆ. ಚಿತ್ರದುರ್ಗದ ಬೃಹನ್ಮಠ ಅವರಿಗೆ 'ವಿದ್ವತ್ ಶಿರೋಮಣಿ' ಪ್ರಶಸ್ತಿಯನ್ನಿತ್ತಿದೆ. ಮುಕ್ತಕ ಸಾಹಿತ್ಯ ಅಕಾಡೆಮಿಯ 'ಹನಿಗವನದ ಹರಿಕಾರ' ಎಂಬ ಪ್ರಶಸ್ತಿಗೂ ಸಿ.ಪಿ.ಕೆ. ಪಾತ್ರರಾಗಿದ್ದಾರೆ.

ಸಿ.ಪಿ.ಕೆ. ಅವರು ಪಡೆದುಕೊಂಡಿರುವ ಗೌರವ ಪ್ರಶಸ್ತಿಗಳು ಈ ಕೆಳಗಿನಂತಿವೆ. ಕರ್ನಾಟಕ ನಾಟಕ ಅಕಾಡೆಮಿಯ ಗೌರವ ಪ್ರಶಸ್ತಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಜಾನಪದ ತಜ್ಞ ಪ್ರಶಸ್ತಿ, ಎಚ್.ಎಲ್.ನಾಗೇಗೌಡ ಜಾನಪದ ತಜ್ಞ ಪ್ರಶಸ್ತಿ,

ರಾಜ್ಯೋತ್ಸವ ಪ್ರಶಸ್ತಿ, ವಿಶ್ವಮಾನವ ಪ್ರಶಸ್ತಿ, ಚುಂಚಶ್ರೀ ಪ್ರಶಸ್ತಿ, ರಮಣಶ್ರೀ ಶರಣ ಪ್ರಶಸ್ತಿ, ಸೀತಾನುತ ಪ್ರಶಸ್ತಿ (ಕರ್ನಾಟಕ ರಕ್ಷಣಾ ವೇದಿಕೆಯ) ವಿಶ್ವಮಾನವ ಕುವೆಂಪು ಪ್ರಶಸ್ತಿ, ಎಸ್.ವಿ.ಪಿ. ಪ್ರಶಸ್ತಿ, ಆಜೂರ ಪ್ರತಿಷ್ಠಾನ ಪುಸ್ತಕ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ, ಹೊಯ್ಸಳ ಪ್ರಶಸ್ತಿ ಮತ್ತು ಮೈಸೂರು ರೋಟರಿ ಉತ್ತರ ರಾಜ್ಯೋತ್ಸವ ಪ್ರಶಸ್ತಿ, ಚುಟುಕುರತ್ನ ಪ್ರಶಸ್ತಿ.

ಅವರು ನಾಲ್ಕು ಗೋಡೆಯ ನಡುವೆ ಅಡಗಿ ಕುಳಿತವರಲ್ಲ; ಗೋಕಾಕ್ ವರದಿಯ ಜಾರಿಗಾಗಿ ನಡೆದ ಚಳುವಳಿಯಲ್ಲಿ ಭಾಗವಹಿಸಿ, ಬೀದಿಗಿಳಿದು ಹೋರಾಡಿದವರು ಕೂಡ. ಈಚೆಗೆ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನಕ್ಕಾಗಿ ನಡೆದ ಹೋರಾಟ, ಕಾವೇರಿ ವಿವಾದ ಸಂಬಂಧವಾದ ಹೋರಾಟಗಳಲ್ಲೂ ಅವರು ಪಾಲ್ಗೊಂಡಿದ್ದರು. ಹೊಗೇನಕಲ್ ವಿವಾದದ ಬಗ್ಗೆ ತಮ್ಮ ಮಿತ್ರರೊಡನೆ ರಾಜ್ಯಪಾಲರನ್ನು ಭೇಟಿಮಾಡಿ ಮನವಿ ಸಲ್ಲಿಸಿದ್ದರು. ಅವರು ಮಾಡಿರುವಷ್ಟು ಭಾಷಣಗಳನ್ನು ಬಹಳ ಜನ ಮಾಡಿಲ್ಲ ಎಂಬುದೂ ಉಲ್ಲೇಖನೀಯ.

ಸಿ.ಪಿ.ಕೆ. ಅವರಿಗೆ 'ಸಾರ್ಥಕ' ಎಂಬ ಅಭಿನಂದನ ಗ್ರಂಥವನ್ನು ೧೯೯೦ರಲ್ಲಿ ಸಮರ್ಪಿಸಲಾಯಿತು.

ಸಿ.ಪಿ.ಕೆ. ಅವರು (ಕವನ, ಹನಿಗವನ, ಖಂಡಕಾವ್ಯ, ವಚನಮುಕ್ತಕ) ವಿಮರ್ಶೆ, ವಿಚಾರ, ಭಾಷಾಂತರ, ಚಿಂತನ ಪ್ರಬಂಧ, ಗ್ರಂಥ ಸಂಪಾದನ ಸಂಶೋಧನ, ಹಾಸ್ಯ, ಜೀವನಚಿತ್ರ, ಮಕ್ಕಳ ಸಾಹಿತ್ಯ ಮುಂತಾದ ವಿವಿಧ ಪ್ರಕಾರಗಳಲ್ಲಿ ಪಂಕ್ತಿಗೊಂಡಿದೆ. ಸಿ.ಪಿ.ಕೆ. ಅವರ ಸಾಹಿತ್ಯ ಸಮೃದ್ಧಿ (ಅವರ ಅನುವಾದದಲ್ಲಿ ನಾಟಕ, ಸಣ್ಣಕತೆಗಳೂ ಸೇರಿವೆ) ಅವರ ಒಟ್ಟು ಕೃತಿಗಳ ಸಂಖ್ಯೆ ಸುಮಾರು ಮುನ್ನೂರು.

**ಸಾಹಿತ್ಯ ಸಾಧನೆ ಮತ್ತು ವಿಚಾರ-ಚಿಂತನೆಗಳು**

ಡಾ. ಸಿ.ಪಿ.ಕೃಷ್ಣಕುಮಾರ್ ಅವರು ಅಗಾಧವಾದ ಸಾಹಿತ್ಯ ಸಾಧನೆಯ ಹಿನ್ನೆಲೆಯುಳ್ಳವರು. ಕವನರಚನೆಯ ಮೂಲಕ ಸುಮಾರು ಅರವತ್ತರ ದಶಕದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿ, ಹಲವಾರು ಕೃತಿಗಳನ್ನು ರಚಿಸಿದ್ದಾರೆ. ವಿದ್ಯಾರ್ಥಿಗಳಿಗೆ ಪರಾಮರ್ಶನ ಕೃತಿಗಳ ಅರಕೆಯಿರುವುದನ್ನು ಮನಗಂಡ ಅವರು ವಿಮರ್ಶೆ, ಭಾಷಾಂತರ, ಕಾವ್ಯಮೀಮಾಂಸೆಗೆ ಸಂಬಂಧಿಸಿದಂತೆ ಕೆಲಸ ಮಾಡಿರುವುದು ಶ್ಲಾಘನೀಯ ವಿಚಾರವಾಗಿದೆ. ಒಟ್ಟಿನಲ್ಲಿ ಸಂಖ್ಯೆಯಲ್ಲೂ ಸತ್ವದಲ್ಲೂ ಸಮಾನವಾಗಿ ನಿಲ್ಲುವ ಕೃತಿರಾಶಿ ಇವರದು. ಈ ನಿಟ್ಟಿನಲ್ಲಿ ಡಾ. ಡಿ.ಬಿ.ರಾಮಚಂದ್ರಾಚಾರ್ ಅವರು ಸಿ.ಪಿ.ಕೆ. ಅವರನ್ನು 'ಸಾಹಿತ್ಯಲೋಕದ ಗವಾಸ್ಕರ್'[೧] ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ.

---

೧. ಡಾ. ಸಿ.ಪಿ.ಕೆ ಅವರ ವಿಮರ್ಶೆ ಮತ್ತು ವಿಚಾರ ಒಂದು ಅಧ್ಯಯನ, ಡಾ. ಪರ್ವೀನ್ ಸಲೀ, ೨೦೧೧, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ಪು. ೬.

ಶ್ರೇಷ್ಠ ಚಿಂತಕರಲ್ಲಿ ಒಬ್ಬರಾದ ಡಾ. ಸಿ.ಪಿ.ಕೆ. ಅವರು ನವೋದಯ ಕಾಲಘಟ್ಟದ ಚಿಂತಕರ ಸಾಲಿಗೆ ಸೇರಿದ್ದಾರೆ. ಪ್ರಶ್ನೆ, ಅನುಮಾನ, ಆತಂಕಗಳು ಚಿಂತಕರನ್ನು, ಸಾಹಿತಿಗಳನ್ನು ವಿಚಾರಕ್ಕೆ ಹಚ್ಚುವ ಪ್ರೇರಕಗಳೆನ್ನುವಂತೆ ಸಿ.ಪಿ.ಕೆ. ಅವರನ್ನು ಬಹಳಷ್ಟು ಕಾಡಿದ ಆತಂಕವೆಂದರೆ ಕನ್ನಡ ನಾಡುನುಡಿಯ ಅಳಿವು ಉಳಿವಿನ ಪ್ರಶ್ನೆ.

ಡಾ. ಸಿ.ಪಿ.ಕೆ. ಅವರಿಗೆ ವಿಷಾದ, ಕಳಕಳಿ, ನೋವು, ಅಸಮಾಧಾನ, ಸಮನ್ವಯ, ಆಶಯ ಹಾಗೂ ಸಲಹೆ ಸೂಚನೆಗಳನ್ನು ಒಳಗೊಂಡಿರುವ ಚಿಂತನೆಗಳು ಅವರ ಬದುಕಿನ ಗೊತ್ತುಗುರಿಗಳ ಆಲೋಚನೆಯ ಹಾಗೂ ಅವರ ವ್ಯಕ್ತಿತ್ವದ ಪ್ರತಿಧ್ವನಿಗಳೆನ್ನಬಹುದು. ಅಂತೆಯೇ ತಮ್ಮ ಪ್ರಬಂಧಗಳ ಉದ್ದೇಶ ಕುರಿತಂತೆ ಲೇಖಕರುಆಡಿರುವ ಮಾತು ಸಮಂಜಸವಾದುದು. "ನನ್ನ ಚಿಂತನ ಪ್ರಬಂಧಗಳು ಇತರ ಉದ್ದೇಶಗಳ ಜೊತೆಗೆ ಇದನ್ನು ಹೊಂದಿದೆ. ಅಮೂಲ್ಯವಾದ ಪ್ರಾಚೀನ ಸೂಕ್ತಿಗಳನ್ನು ವರ್ತಮಾನಕ್ಕೆ ನೆನಪಿಸುವುದು ಮತ್ತು ಇಂದಿಗೆ ತಕ್ಕಂತೆ ಪುನರ್ ವ್ಯಾಖ್ಯಾನಿಸುವುದು. ಹೀಗಾಗಿ ಇವು ಬರಿಯ ನಿತ್ಯುಪದೇಶಗಳಲ್ಲ. ವಿಚಾರ ನವನೀತಗಳೂ ಕೂಡ".

ಸಿ.ಪಿ.ಕೆ.ಯವರು ಬದುಕಿನ ಬಗ್ಗೆ ಹಲವಾರು ಚಿಂತನೆಗಳನ್ನು ನಡೆಸಿದ್ದಾರೆ. ಇದಲ್ಲದೆ ಪ್ರೀತಿ, ಪ್ರೇಮ, ಸುಖದುಃಖಗಳ, ಸಂಸಾರ ವಿದ್ಯೆ, ಸಾಕ್ಷರತೆ, ಶಿಕ್ಷಣ, ದೇವರು, ಆಧ್ಯಾತ್ಮ, ಜಾತಿ, ಮೌಢ್ಯತೆಗಳು, ಸಾವಿನ ಬಗೆಗೆ ಪರಿಸರದ ಬಗೆಗೆ, ಮಾತು, ಕನ್ನಡನಾಡು, ನುಡಿ, ಕಾವ್ಯಮೀಮಾಂಸೆ ಸಾಮಾಜಿಕ ಅವ್ಯವಸ್ಥೆಯ ಬಗ್ಗೆ, ಇಂಗ್ಲಿಷ್ ಸೂಕ್ತಿಗಳು, ವಿಜ್ಞಾನ-ವಿಚಾರ ಇವೇ ಮುಂತಾದಂತಹ ಅಂಶಗಳ ಬಗ್ಗೆ ಹಲವಾರು ಚಿಂತನಾ ಲೇಖನಗಳನ್ನು ಬರೆದಿದ್ದಾರೆ.

ಹೀಗೆ ಸಿ.ಪಿ.ಕೆ.ಯವರ ಸಾಹಿತ್ಯ ಕೃತಿಗಳ ವಿವರ ಈ ಕೆಳಗಿನಂತಿದೆ.

## ಕೃತಿಶ್ರೇಣಿ

**ಕಾವ್ಯ**

೧. ಅಂತರತಮ
೨. ಅನಂತ-ಪೃಥ್ವೀ
೩. ಅಹನ್ಯ ಹನಿ
೪. ಆಯ್ದ ನೂರೊಂದು ಕವನ
೫. ಎಪ್ಪತ್ತರ ಎತ್ತರ
೬. ಒಳದನಿ
೭. ಕಣಕ್ಷಣ
೮. ಕನವರಿಕೆ
೯. ಕನ್ನಡಿಯ ಕಿಚ್ಚು
೧೦. ಕವಿತೆ ನಿಲ್ಲುವುದಿಲ್ಲ
೧೧. ಕಾರಣಿಕ ವಚನಗಳು
೧೨. ಚಿಕ್ಕೆ ಚೂರು
೧೩. ಚೋದ್ಯ-ಕುಚೋದ್ಯ
೧೪. ತಾರಾಸಖ
೧೫. ತೊಟ್ಟುಗಳು
೧೬. ನೀವೆ ನಮಗೆ ದಿಕ್ಕು

೧೭. ನೂರೊಂದು
೧೮. ಪದ ಪದರ
೧೯. ಪ್ರಕೃತಿ
೨೦. ಪರ್ಯ್ಯಾಯ
೨೧. ಬಿಂದು ಬೆರಗು
೨೨. ಬೊಗಸೆ
೨೩. ವಚನ ನಿವೇದನ
೨೪. ವಚನ ಮಾಚದ ಮನ
೨೫. ವಚನ ವರ್ಧನ
೨೬. ವಚನ ವಿಜ್ಞಾಪನ
೨೭. ಮುಕ್ತಕ ಮುಕುರ
೨೮. ಮುಕ್ತಾವಳಿ
೨೯. ಮುಕ್ತಾಹಾರ
೩೦. ಲಯವಿಲ್ಲದ ಬದುಕು
೩೧. ವರ್ತಮಾನ
೩೨. ವ್ಯಾಸ ಭಾಗ್ಯ
೩೩. ಶರದದ ಮುಗಿಲು
೩೪. ಸರಾಗ
೩೫. ಸಾನೆಟ್ ಸಾಲು
೩೬. ಸಿಪಿಕೆ ಚುಟುಕುಗಳು
೩೭. ಸಿಪಿಕೆ ಸಮಗ್ರ ಕವಿತೆ
೩೮. ಸುನಿತ ಶತ
೩೯. ಹನಿಮಿನಿ

**ಚಿಂತನ, ಪ್ರಬಂಧ**

೪೦. ಕಿರಣ ತೋರಣ
೪೧. ಕೋಲ್ಮಿಂಚು
೪೨. ಚಿಂತನ ಚಯ
೪೩. ಚಿಂತನ ಬಿಂದು
೪೪. ಚಿಂತನ ಧಾರೆ
೪೫. ಚಿಂತನ ಹಾರ
೪೬. ಚಿಲುಮೆ
೪೭. ಜಾಜಿ ಮಲ್ಲಿಗೆ
೪೮. ದೀಪ ಸ್ಮಿತ
೪೯. ನವನೀತ
೫೦. ಬಿಗು ಲಘು
೫೧. ಮಣಿಗಣ
೫೨. ಮಣಿಮಾಲೆ
೫೩. ಮೆಲುಕು
೫೪. ವಿಚಾರ ತುಷಾರ
೫೫. ವಿಚಾರ ನಿಮಿಷ
೫೬. ಸಮ್ಮಥನ
೫೭. ಸೂಜಿಮಲ್ಲಿಗೆ
೫೮. ಹರಳು
೫೯. ಹವಳ
೬೦. ಹಳಕು
೬೧. ಹೇಮಧೂಳಿ

**ವಿಚಾರ, ವಿಮರ್ಶೆ, ಸಂಶೋಧನೆ**

೬೨. ಅಧ್ಯಯನ
೬೩. ಆಲೋಚನ
೬೪. ಈ ಕ್ಷಣ
೬೫. ಉಪಚಯ
೬೬. ಎರಡು ಜೈನ ಪುರಾಣಗಳು
೬೭. ಐವರು ವಚನಕಾರರು
೬೮. ಕನಕ : ಕೆಲವು ಮುಖ
೬೯. ಕನ್ನಡ ಕಾವ್ಯ : ಹತ್ತು ವರುಷ
೭೦. ಕನ್ನಡದ ಕಾರಣ
೭೧. ಕನ್ನಡ ಚತುರ್ಮುಖ

೧೨೪. ಮಾಸ್ತಿ ಕೃತಿ ಚತುರ್ಮುಖ

೧೨೫. ಮುಕ್ತಕ ಮನನ

೧೨೬. ಮುನ್ನುಡಿ ಮಾಲೆ

೧೨೭. ಮೂರು ಭಾರತ ಎರಡು ಪರ್ವ

೧೨೮. ಯಶೋಧರ ಚರಿತಂ : ಒಂದು ಸಮೀಕ್ಷೆ

೧೨೯. ರಂಗಣ್ಣ ಎಸ್.ವಿ.

೧೩೦. ರನ್ನ

೧೩೧. ರನ್ನ : ಕೆಲವು ಮುಖಗಳು

೧೩೨. ರನ್ನ ಪರೀಕ್ಷೆ

೧೩೩. ವಚನ ವಿಲೋಕನ

೧೩೪. ವಚನ ವಿವೇಚನ

೧೩೫. ವಿಚಾರ ವಿಹಾರ

೧೩೬. ವಿಭಾವನೆ

೧೩೭. ವಿಭೂತಿ ವಿಭಾವನೆ

೧೩೮. ಶಾಸನಶಾಸ್ತ್ರ ಪ್ರವೇಶ

೧೩೯. ಶೋಧನ

೧೪೦. ಶ್ರೀರಾಮಾಯಣ ದರ್ಶನಂ

೧೪೧. ಶ್ರೀರಾಮಕೃಷ್ಣರು ಮತ್ತು ಯುಗಧರ್ಮ

೧೪೨. ಶ್ರೀಸಾಮಾನ್ಯ ಮತ್ತು ಭಗವದ್ಗೀತೆ

೧೪೩. ಶ್ರೀಸಾಹಿತ್ಯ ಸಿರಿ

೧೪೪. ಷಷ್ಟಿಲೇಖ

೧೪೫. ಸಪ್ತಸಮಾಲೋಕ

೧೪೬. ಸಭಾಪರ್ವ ಸಂತುಲನ

೧೪೭. ಸಮಾವೇಶ

೧೪೮. ಸಮಾಹಾರ

೧೪೯. ಸಮ್ಮೇಳನ

೧೫೦. ಸಾಹಿತ್ಯ ಮನನ

೧೫೧. ಸಾಹಿತ್ಯ ಶೀಲನ

೧೫೨. ಸಾಹಿತ್ಯ ಶೈಲಗಳು

೧೫೩. ಸಾಹಿತ್ಯ ಸಂಗತಿ

೧೫೪. ಸೀಮಾಪುರುಷರು

೧೫೫. ಹತ್ತು ಹೊತ್ತಗೆಗಳು

೧೫೬. ಹನ್ನೆರಡನೆಯ ಶತಮಾನದ ಕರ್ನಾಟಕ

೧೫೭. ಹರಿಹರ ಪರಿಭಾವನೆ

**ಭಾಷಾಂತರ ಇಂಗ್ಲಿಷಿನಿಂದ (ಸೃಜನಶೀಲ)**

೧೫೮. ಕೃತಿಪ್ರತಿ

೧೫೯. ಗೀತಾಂಜಲಿ

೧೬೦. ಠಾಕೂರ್ ವಚನಾಂಜಲಿ

೧೬೧. ತಾಯಿ

೧೬೨. ನಿಶ್ಯಬ್ಧದಲ್ಲಿ ಕವಿ

೧೬೩. ನೋವಿನ ದೇವತೆಗೆ

೧೬೪. ಪುರಾತನ ನಾವಿಕ

೧೬೫. ಹನ್ನೊಂದು ಹೊರಗಿನ ಕತೆ

**ಭಾಷಾಂತರ ಇಂಗ್ಲಿಷಿನಿಂದ (ಸೃಜನೇತರ)**

೧೬೬. ಇತಿಹಾಸ ಪುರಾಣಗಳು

೧೬೭. ಎಲಿಯಟ್ಟನ ಮೂರು ಉಪನ್ಯಾಸಗಳು

೧೬೮. ಕಲಾತತ್ತ್ವ

೧೬೯. ಕಲೆ ಎಂದರೇನು

೧೭೦. ಕಾವ್ಯವಿಚಾರ ಸಾರ

೧೭೧. ಗಾಂಧಿ ಮತ್ತು ಕಲೆ

೧೭೨. ಗಾಂಧಿ ಕಾಣ್ಕೆ

೧೭೩. ಪಂಡಿತ ಗೋವಿಂದ ವಲ್ಲಭ ಪಂತ್ : ವಿಚಾರಧಾರೆ

೧೭೪. ಪಾಶ್ಚಾತ್ಯ ಕಾವ್ಯಚಿಂತನ

೧೭೫. ಪಾಶ್ಚಾತ್ಯ ವಿಮರ್ಶೆ : ಪಂಚಮುಖ

೧೭೬. ಪ್ರೇಮತತ್ತ್ವ

೧೭೭. ಭಾರತೀಯ ಶಾಸನಶಾಸ್ತ್ರ ಪರಿಚಯ

೧೭೮. ಭಾಷಾ ಮಾಧ್ಯಮವನ್ನು ಕುರಿತು

೧೭೯. ಮಹತ್‌ಕಾವ್ಯ ಕಲ್ಪನೆ

೧೮೦. ಮಹಾತ್ಮ (ಇತರರೊಡನೆ)

೧೮೧. ರಾಮಕೃಷ್ಣಮಠ ಮತ್ತು ಮಿಷನ್

೧೮೨. ವಿದ್ಯಾಪತಿ

೧೮೩. ಸಂಕಲನ

೧೮೪. ಸಾಹಿತ್ಯ ತತ್ತ್ವ

೧೮೫. ಸಾಹಿತ್ಯ ಪ್ರವೇಶ

೧೮೬. ಸಾಹಿತ್ಯ ಮತ್ತು ಮನೋವಿಜ್ಞಾನ

೧೮೭. ಸಾಹಿತ್ಯ ವಿಮರ್ಶೆಯ ತತ್ವಗಳು

**ಭಾಷಾಂತರ ಗ್ರೀಕ್‌ನಿಂದ (ಇಂಗ್ಲಿಷ್ ಮೂಲಕ)**

೧೮೮. ಅಗಮೆಮ್ನನ್

೧೮೯. ಈಸ್ಕಿಲಸ್‌ನ ಎರಡು ನಾಟಕಗಳು

೧೯೦. ಏಳು ಗ್ರೀಕ್ ನಾಟಕಗಳು

೧೯೧. ಫಿಲೋಕ್ಟೆಟಿಸ್

೧೯೨. ಮೀಡಿಯ

೧೯೩. ಹಿಪ್ಪೋಲಿಟಸ್

೧೯೪. ಹೆಲೆನ್

**ಭಾಷಾಂತರ : ಸಂಸ್ಕೃತ ಪ್ರಾಕೃತದಿಂದ**

೧೯೫. ಅಭಿಜ್ಞಾನ ಶಾಕುಂತಲ

೧೯೬. ಊರುಭಂಗ

೧೯೭. ಹತ್ತು ಸಂಸ್ಕೃತ ಪ್ರಾಕೃತ ಕಾವ್ಯಗಳು

೧೯೮. ಕನ್ನಡ ಉತ್ತರ ರಾಮಚರಿತ

೧೯೯. ಕನ್ನಡಕುಮಾರ ಸಂಭವ

೨೦೦. ಕನ್ನಡ ನಾಗಾನಂದ

೨೦೧. ಕನ್ನಡ ಪ್ರಿಯದರ್ಶಿಕಾ

೨೦೨. ಕನ್ನಡ ಮಹಾಭಾರತ ವಿರಾಟಪರ್ವ

೨೦೩. ಕನ್ನಡ ಯಶೋಧರ ಚರಿತ

೨೦೪. ಕನ್ನಡ ರತ್ನಾವಳಿ

೨೦೫. ಕನ್ನಡ ವೇಣೀಸಂಹಾರ

೨೦೬. ಕನ್ನಡ ಸೌಂದರ್ಯ ಲಹರಿ

೨೦೭. ಕನ್ನಡ ಸ್ವಪ್ನ ನಾಟಕ

೨೦೮. ಜಸಹರ ಚರಿಉ (ಪ್ರಾಕೃತದಿಂದ)

೨೦೯. ಧಮ್ಮಪದ ಸಾರ (ಪಾಳಿಯಿಂದ)

೨೧೦. ಪಂಚರಾತ್ರ

೨೧೧. ಬೆಳಕಿನ ಹನಿಗಳು

೨೧೨. ಭಾಸನ ಎರಡು ನಾಟಕಗಳು

೨೧೩. ಯಶೋಧರ ಚಂದ್ರಮತೀ ಕಥಾನಕ

೨೧೪. ರಾಮಾಯಣ : ಬಾಲಕಾಂಡ (ಸುಜನಾರೊಡನೆ)

೨೧೫. ವಿರಾಟಪರ್ವ : ಉತ್ತರ ಪ್ರಸಂಗ

೨೧೬. ಶ್ರೀಕೃಷ್ಣ ಕರ್ಣಾಮೃತ ಸಾರ

೨೧೭. ಸಮಗ್ರಹ ಭಾಗವತ

೨೧೮. ಸಂಗ್ರಹ ಮಹಾಭಾರತ

೨೧೯. ಸಂಗ್ರಹ ರಾಮಾಯಣ

೨೨೦. ಹತ್ತು ಸಂಸ್ಕೃತ ನಾಟಕಗಳು

### ಜಾನಪದ

೨೨೧. ಒಗಟು ಮತ್ತು ಗಾದೆ

೨೨೨. ಕಾಡಿನ ಹಾಡುಗಳು

೨೨೩. ಗಂಧದ ಕೋಟೆ ಗಮಗಮ

೨೨೪. ಚೆಲುವಯ್ಯ – ವರನಂದಿ

೨೨೫. ಚುಂಚನಗಿರಿ (ಸಂ. ಇತರರೊಡನೆ)

೨೨೬. ಜನಪದ ಗೀತೆ

೨೨೭. ಜನಪದ ಸಾಹಿತ್ಯ ಪ್ರವೇಶಿಕೆ

೨೨೮. ಜಾನಪದ ಜಾಗರ

೨೨೯. ಜಾನಪದ : ತತ್ತ್ವ ಮತ್ತು ಸತ್ತ್ವ

೨೩೦. ಜಾನಪದ ಪ್ರತಿಭೆ

೨೩೧. ಜಾನಪದ ಸರಸ್ವತಿ

೨೩೨. ಮುತ್ತ ತುಂಬೇವು ಕಣಜಕೆ (ಸಂ. ಇತರರೊಡನೆ)

೨೩೩. ರಾಜಾಸ್ಥಾನದ ಜಾನಪದ (ಅನು)

೨೩೪. ಹಬ್ಬಲಿ ಅವರ ಹಸಬಳ್ಳಿ (ಸಂ.)

### ವ್ಯಕ್ತಿ ಚಿತ್ರ

೨೩೫. ಬಸವೇಶ್ವರ

೨೩೬. ರತ್ನತ್ರಯ

೨೩೭. ರಾಮಕೃಷ್ಣ ಪರಮಹಂಸರು

೨೩೮. ಶ್ರೀರಾಮಕೃಷ್ಣ ವಿವೇಕ ಶಾರದಾ

೨೩೯. ಶ್ರೀಶಾರದಾದೇವಿ

೨೪೦. ಸಾಕ್ರಟೀಸ್

೨೪೧. ಸ್ವಾಮಿ ವಿವೇಕಾನಂದ

೨೪೨. ಹಿರಿಯರ ಗೆರೆಗಳು

### ಹಾಸ್ಯ, ವಿಡಂಬನ

೨೪೩. ನಗುಬಿಗು

೨೪೪. ಮಧ್ಯಾಹ್ನದ ನಿದ್ದೆ

### ಗ್ರಂಥ ಸಂಪಾದನ

೨೪೫. ಅರಣ್ಯಪರ್ವ

೨೪೬. ಅನುಭವ ಮುಕುರಂ ಮತ್ತು ಶಾಸನಗಳು

೨೪೭. ಕರ್ನಾಟಕ ಪಂಚತಂತ್ರಂ

೨೪೮. ಜನ್ನ ಸಂಪುಟ

೨೪೯. ಯಶೋಧರ ಚರಿತೆ

೨೫೦. ಷಟ್ಸ್ಥಲ ಶಿವಾಯಣ (ಇತರರೊಡನೆ)

೨೫೧. ಹರಿಶ್ಚಂದ್ರ ಸಾಂಗತ್ಯ (ರಾಮರಸ ವಿರೂಪಾಕ್ಷ)

೨೫೨. ಹರಿಶ್ಚಂದ್ರ ಕಾವ್ಯ (ಹಲಗ)

### ಇತರ ಸಂಪಾದನ

೨೫೩. ಅಂತಃಕರಣ (ಇತರರೊಡನೆ)

೨೫೪. ಅಮೃತ ಸಂಪುಟ (ಇತರರೊಡನೆ)

೨೫೫. ಆಯ್ದ ಕುವೆಂಪು ಕವನಗಳು

೨೫೬. ಇಕ್ಷು ಕಾವೇರಿ (ಇತರರೊಡನೆ)

೨೫೭. ಕಟ್ಟೀಮನಿ : ಬದುಕು –ಬರಹ (ಇತರರೊಡನೆ)

೨೫೮. ಕನ್ನಡ ಛಂದಸ್ಸಿನ ಚರಿತ್ರೆ –೧

೨೫೯. ಕನ್ನಡ ಛಂದಸ್ಸಿನ ಚರಿತ್ರೆ –೨

೨೬೦. ಕನ್ನಡ ಭಾರತಿ ೨ (ಇತರರೊಡನೆ)

೨೬೧. ಕನ್ನಡ ರತ್ನಕೋಶ (ಇತರರೊಡನೆ)

೨೬೨. ಕನ್ನಡ ವಿಮರ್ಶೆ (ಇತರರೊಡನೆ)

೨೬೩. ಕವಿಶೈಲ

೨೬೪. ಕಾಮಳ್ಳಿ

೨೬೫. ಕಾವ್ಯ ನಂದನ

೨೬೬. ಕಾವ್ಯಾರಾಮ

೨೬೭. ಕುಂಭ (ಇತರರೊಡನೆ)

೨೬೮. ಗದ್ಯ ವಿಹಾರ ೨ (ಇತರರೊಡನೆ)

೨೬೯. ಗದ್ಯ ವಿಹಾರ ೪ (ಇತರರೊಡನೆ)

೨೭೦. ಜನ್ನ (ಇತರರೊಡನೆ)

೨೭೧. ಮಾರ್ಗದರ್ಶಕರು(ಇತರರೊಡನೆ)

೨೭೨. ಯದುಗಿರಿ (ಇತರರೊಡನೆ)

೨೭೩. ಯದುಗಿರಿಯ ವೀಣೆ (ಇತರರೊಡನೆ)

೨೭೪. ವಚನ ವರ್ತಮಾನ (ಇತರರೊಡನೆ)

೨೭೫. ಪಂಪ : ಒಂದು ಒಳನೋಟ

೨೭೬. ಶ್ರೀಗಂಧ

೨೭೭. ಸಹ್ಯಾದ್ರಿ (ಇತರರೊಡನೆ)

೨೭೮. ಸಂವಹನ ಕಾವ್ಯ (ಇತರರೊಡನೆ)

೨೭೯. ಸಾಹಿತ್ಯ ವಿಮರ್ಶೆ ೧೯೮೦ (ಇತರರೊಡನೆ)

೨೮೦. ಸಾಹಿತ್ಯಸೌಧ (ಇತರರೊಡನೆ)

೨೮೧. ಸಾಹಿತ್ಯಾರಾಧನೆ (ಇತರರೊಡನೆ)

೨೮೨. ಸುರನದಿಯ ತೀರ್ಥ

೨೮೩. ಸುರುಚಿ : ನೂರು

೨೮೪. ಸುವರ್ಣ ಶಿಕ್ಷಣ (ಇತರರೊಡನೆ)

೨೮೫. ಸುವರ್ಣ ಸಂವಹನ (ಇತರರೊಡನೆ)

೨೮೬. ಸ್ವಸ್ತಿ (ಇತರರೊಡನೆ)

**ಮಕ್ಕಳ ಸಾಹಿತ್ಯ**

೨೮೭. ಏನು? ಏಕೆ? ಹೇಗೆ?

೨೮೮. ಪರಮಹಂಸ ಕಥಾವಳಿ

೨೮೯. ಪರಮಹಂಸರ ಕಥೆಗಳು

೨೯೦. ಶ್ರೀರಾಮಕೃಷ್ಣರ ಕಥೆಗಳು

೨೯೧. ವಸುಭೂತಿ ಕಥೆ

**ಸಂಕೀರ್ಣ**

೨೯೨. ಅಹಿಂಸೆ

೨೯೩. ಕುಮಾರವ್ಯಾಸನ ಹತ್ತು ಚಿತ್ರಗಳು

೨೯೪. ಜನಪದ ಪ್ರಣಯ ಪ್ರಸಂಗಗಳು

೨೯೫. ಕುವೆಂಪು ಸಂದರ್ಶನ

೨೯೬. ಮಹಾಕವಿಯೊಡನೆ ಮಾತುಕತೆ

೨೯೭. ಶೃಂಗಾರ ಲಹರಿ

*****

# ಅಧ್ಯಾಯ – ೪

# ಆಧುನಿಕ ಕನ್ನಡ ಸಾಹಿತ್ಯದಲ್ಲಿ ಚುಟುಕು ಸಾಹಿತ್ಯವನ್ನು ರೂಢಿಸಿದ ಕವಿಗಳು

ಕನ್ನಡ ಸಾಹಿತ್ಯದ ಕಾವ್ಯಪ್ರಕಾರವಾದ ಚುಟುಕು ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದಂತಹ ಛಾಪನ್ನು ಮೂಡಿಸಿದೆ. ಸರ್ವಜ್ಞನ ತ್ರಿಪದಿಯಿಂದ ಹಿಡಿದು ಇಲ್ಲಿಯವರೆಗೂ ತನ್ನ ಕುಟುಕುವಿಕೆಯನ್ನು ಮುಂದುವರಿಸುತ್ತಾ ಬಂದಿದೆ. ಏಕೆಂದರೆ ಚುಟುಕು ಚೇಳು ಇದ್ದ ಹಾಗೆ. ಚೇಳಿನ ಬಾಲದಲ್ಲಿ ಕುಟುಕಿದಾಗ ಹೇಗೆ ವಿಷ ಹೊರಬರುತ್ತದೆಯೋ ಹಾಗೆಯೇ ಚುಟುಕು ಸಹ ತನ್ನದೇ ಆದಂತಹ ಕುಟುಕನ್ನು ಸಮಾಜದ ಆಗು–ಹೋಗುಗಳನ್ನು ವಿಡಂಬಿಸುವುದರ ಮೂಲಕ ವಿಷವನ್ನು ಹೊರಹಾಕುತ್ತದೆ.

Lymericನಿಂದ ಹೊರಬಂದಂತಹ ಈ ಚುಟುಕು ವೇದಕಾಲಕ್ಕೆ ಹೇಳಿ ಮಾಡಿಸಿದಂತಹ ಪ್ರಕಾರವಾಗಿದ್ದು, ಪ್ರಸ್ತುತದಲ್ಲಿಯೂ ಸಹ ತನ್ನದೇ ಮಹತ್ವವನ್ನು ಸಾರುತ್ತಿದೆ. ಚುಟುಕು ಎಂಬುದು ಮೂರಕ್ಷರವಾದರು ಇದರ ಸಾರ ಮಾತ್ರ ಆಳವಾದದ್ದು. ಇಂದಿನ ಸಮಾಜದಲ್ಲಿನ ಅವ್ಯವಸ್ಥೆಯನ್ನು ಹೋಗಲಾಡಿಸಬೇಕಾದರೆ ಇಂತಹ ನಯ–ನಾಜೂಕಾದ, ಚಾತುರ್ಯತೆಯ ಪದಗಳ ಬಳಕೆ ಅತ್ಯಂತ ಅವಶ್ಯಕವಾಗಿದೆ.

೨೧ನೇ ಶತಮಾನವು ಕೈಗಾರಿಕೀಕರಣ, ನಗರೀಕರಣ, ಜಾಗತೀಕರಣದ ಪ್ರಭಾವದಿಂದಾಗಿ ಜನರು ತ್ವರಿತಗತಿಯ ಜೀವನಶೈಲಿಯನ್ನು ರೂಪಿಸಿಕೊಳ್ಳುತ್ತಿದ್ದಾರೆ. ಇದರಿಂದಾಗಿಯೇ ಈ ದಿನಗಳಲ್ಲಿ ಜನರಿಗೆ ಪುರುಸೊತ್ತಿಲ್ಲದ ಕಾಲವಾಗಿ ಪರಿಣಮಿಸಿದೆ. ಇಂತಹ ಸಂದರ್ಭದಲ್ಲಿ ಈವತ್ತಿಗೆ ಈ ಚುಟುಕು ಹೇಳಿಮಾಡಿಸಿದಂತಹ ಸಾಹಿತ್ಯ–ಪ್ರಕಾರವಾಗಿದೆ. ಏಕೆಂದರೆ ಇತ್ತೀಚಿನ ದಿನಗಳಲ್ಲಿ ವಿವರಣೆಯನ್ನು ಓದುವುದೇ ಕಷ್ಟ ಬರೀ ಪತ್ರಿಕೆಗಳಲ್ಲಿ ಮುಖ್ಯವಾದ, ಅದರಲ್ಲೂ ದಪ್ಪನೆಯ ಸಾಲುಗಳನ್ನು ಜನರು ಗಮನಿಸುತ್ತಾರೆಯೇ ವಿನಃ ಅದರೊಳಗಿನ ತಿರುಳನ್ನು ಗಮನಿಸುವುದಿಲ್ಲ. ಆದ್ದರಿಂದಾಗಿ ವಿವರಣೆ ತನ್ನ ಗರ್ಭದಲ್ಲಿ ಹುದುಗಿಕೊಂಡು ಮೇಲ್ನೋಟಕ್ಕೆ ಮೂರ್ತಿ ಚಿಕ್ಕದಾದರೂ ಕೀರ್ತಿಪತಾಕೆ ಮಾತ್ರ ಯಾವಾಗಲೂ ರಾರಾಜಿಸುವಂತೆ ಮಾಡುವ ಚಾತುರ್ಯವನ್ನು ಬಲ್ಲ ಈ ಚುಟುಕು ತನ್ನದೇ ಆದ ಸಾರಸ್ವತ ಲೋಕದಲ್ಲಿ ರಾರಾಜಿಸುತ್ತಿದೆ. ಆದ್ದರಿಂದಾಗಿ ಈ ನಿಟ್ಟಿನಲ್ಲಿ ಅನೇಕ ಕವಿಗಳು ಚುಟುಕು ರಚನೆಯನ್ನು ಕೈಗೊಂಡರು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಚುಟುಕು ಸಾಹಿತ್ಯವನ್ನು ರೂಢಿಸಿದ ಕವಿಗಳೆಂದರೆ ಎಚ್.ಡುಂಡಿರಾಜ್, ಅಕಬರ ಅಲಿ, ದಿನಕರ ದೇಸಾಯಿ, ಡಾ. ಸಿಪಿಕೆ, ಡಾ. ಚನ್ನವೀರ ಕಣವಿ,

ಬಿ.ಟಿ.ಲಲಿತಾ ನಾಯಕ್, ಚಂಪಾ, ಡಾ. ಅರವಿಂದ ಮಾಲಗತ್ತಿ, ಡಾ. ಪಂಚಾಕ್ಷರಿ ಹಿರೇಮಠ, ಧ್ರುವರಾಜ ಜೋಶಿ, ಎಸ್.ವಿ.ರಂಗಣ್ಣ, ಎಸ್.ವಿ.ಪರಮೇಶ್ವರ ಭಟ್ಟ, ವಿ.ಜಿ.ಭಟ್ಟ ಇವರೇ ಮೊದಲಾದ ಪ್ರತಿಭಾನ್ವಿತ ಕವಿಗಳಿಂದ ಪುಷ್ಟಿಗೊಂಡು ಬೆಳೆದಿರುವ ಚುಟುಕು ಸಾಹಿತ್ಯ ತನ್ನ ಸಂಕ್ಷಿಪ್ತ ವಿವರಣೆಯ ಮೂಲಕ ಪ್ರಾಮುಖ್ಯತೆಯನ್ನು ಗಳಿಸಿಕೊಂಡಿದೆ.

ಎಚ್.ಡುಂಡಿರಾಜ್‌ರವರು ಓದಿದ್ದು ಕೃಷಿ ವಿಜ್ಞಾನ. ಕಾರ್ಪೊರೇಶನ್ ಬ್ಯಾಂಕಿನಲ್ಲಿ ಹಿರಿಯ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಅವರು ಇಲ್ಲಿಯವರೆಗೆ ೨೦೦೦ಕ್ಕೂ ಹೆಚ್ಚು ಹನಿಗವನಗಳನ್ನು ಬರೆದು ಈ ಪ್ರಕಾರದಲ್ಲಿ ತಮ್ಮ ಛಾಪನ್ನು ಒತ್ತಿದ್ದಾರೆ. ಇವರ ಹನಿಗವನ ಇಂತಿದೆ.

**ಗಾಂಧಿ ತತ್ವ**

**ಗಾಂಧಿ ತತ್ವಗಳ ಅನುಷ್ಠಾನಕ್ಕೆ**
**ಹುಬ್ಬಳ್ಳಿ ಬಳಿ**
**ಗಾಂಧಿಗ್ರಾಮ ನಿರ್ಮಾಣ**
**ಉಳಿದ ಕಡೆಗಳಲ್ಲಿ**
**ಎಂದಿನ ಹಾಗೆ;**
**ಗಾಂಧಿ–ತತ್ವಗಳ ನಿರ್ವಾಣ!**

(ಎಚ್.ಡುಂಡಿರಾಜ್, ಹನಿಗವನಗಳು, ಪು. ೧೦)

ಹೀಗೆ ಇರುವುದು ೬ ಸಾಲು, ಕಡಿಮೆ ಪದಗಳ ಬಳಕೆಯಾಗಿದ್ದರು ಗಾಂಧಿತತ್ವದ ಬಗ್ಗೆ ತಿಳಿಸುತ್ತದೆ. ಹೀಗೆ ಗಾಂಧೀ ಗ್ರಾಮ ನಿರ್ಮಾಣವಾದರು, ಗಾಂಧಿ ತತ್ವ ನಾಶವನ್ನು ಹೊಂದುತ್ತಿದೆ. ಸ್ವಾತಂತ್ರ್ಯ ದಿನಾಚರಣೆ, ಗಾಂಧಿ ಜಯಂತಿ ದಿನ ಗಾಂಧಿಯ ಮಹಿಮೆ ತಿಳಿಯುತ್ತದೆ ವಿನಃ ಉಳಿದ ದಿನಗಳಲ್ಲಿ ಜನರಲ್ಲಿ ಗಾಂಧಿಯ ಬಗ್ಗೆ ಯಾವುದೇ ಪರಿಜ್ಞಾನವಿರುವುದಿಲ್ಲ. ಎಂತಹ ದುಃಸ್ಥಿತಿ ನಮ್ಮ ದೇಶಕ್ಕೆ ಒದಗಿಬಂದಿದೆಯೆಂಬುದು ತಿಳಿದುಬರುತ್ತಿದೆ.

ಪ್ರಸ್ತುತದಲ್ಲಿ ಸರ್ಕಾರದ ಅವ್ಯವಸ್ಥೆಯ ಬಗ್ಗೆ ಈ ಹನಿಗವನ ನಮ್ಮ ಗಮನವನ್ನು ಸೆಳೆಯುತ್ತಿದೆ.

**ಪ್ರಶ್ನೆ**

**ಗ್ಯಾಸ್ ಸಿಲಿಂಡರ್ ಮೇಲೆ**
**ಮಿತಿ ಹೇರಿಕೆ**
**ಸಬ್ಸಿಡಿ ರಹಿತ ಸಿಲಿಂಡರ್**

**ಬೆಲೆ ಏರಿಕೆ**
**ಹೇಳೆ ಸಖಿ ಹೇಳೆ**
**ಬೇಯುವುದು ಹೇಗೆ**
**ಶ್ರೀಸಾಮಾನ್ಯರ ಬೇಳೆ?**

(ಎಚ್.ದುಂಡಿರಾಜ್, ಹನಿಗವನಗಳು, ಪು. ೪೩)

ಹೀಗೆ ಸರ್ಕಾರ ಶ್ರೀಸಾಮಾನ್ಯರನ್ನು ಗಮನಕ್ಕೆ ತೆಗೆದುಕೊಳ್ಳುತ್ತಿಲ್ಲ. ಸಬ್ಸಿಡಿಯನ್ನು ಕೊಡುವುದೇಕೆ ಅಥವಾ ಕಿತ್ತಿಕೊಳ್ಳುವುದೇಕೆ? ಇಂತಹ ತಾರತಮ್ಯತೆಯು ಸಮಾಜದ ಮೇಲೆ ದುಷ್ಪರಿಣಾಮವನ್ನು ಬೀರುತ್ತದೆ. ಆದ್ದರಿಂದಲೇ ಭಾರತ ದೇಶದಲ್ಲಿ ಈವತ್ತಿಗೂ ಬಡವ ಬಡವನಾಗಿದ್ದಾನೆ, ಶ್ರೀಮಂತ ಶ್ರೀಮಂತನಾಗುತ್ತಿದ್ದಾನೆ. ಭಾರತ ದೇಶವು ಬಡವರ ದೇಶವಾಗಿದೆ. ರೈತರ ಬೀಡಾಗಿದೆ. ಹಾಗಾಗಿ ಯಾವುದೇ ವ್ಯವಸ್ಥೆಯಲ್ಲಿ ಮೊದಲು ಶ್ರೀ ಸಾಮಾನ್ಯನಿಗೆ ನಂತರ ಉಳ್ಳವರಿಗೆ ಎಂಬ ರಾಜನೀತಿಯನ್ನು ಮೊದಲು ಜಾರಿಗೊಳಿಸಬೇಕಾಗಿದೆ. ಇದರಿಂದಾಗಿ ಅವ್ಯವಸ್ಥೆಯನ್ನು ಸ್ವಲ್ಪಮಟ್ಟಿಗಾದರೂ ತೊಡೆದು-ಹಾಕಬಹುದಾಗಿದೆ.

ಕೆಳಗಿನ ಚುಟುಕು ಪರಿಸರದ ಆಗು-ಹೋಗುಗಳಿಗೆ ಕನ್ನಡಿ ಹಿಡಿದಂತಿದೆ.

**ಶಾಮೀಲು**

**ಮೊನ್ನೆಯ ಗಾಳಿ ಮಳೆಗೆ**
**ಧರೆಗುರುಳಿದ ಮರಗಳು**
**ಹೇಳುತ್ತಿದ್ದವು ತಮ್ಮ ಬಂಧುಗಳಿಗೆ**
**ಮಳೆರಾಯನೂ ಶಾಮೀಲಾಗಿದ್ದಾನೆ**
**ಹಾಳು ಮನುಷ್ಯರ ಜೊತೆಗೆ!**

(ಎಚ್.ದುಂಡಿರಾಜ್, ಹನಿಗವನಗಳು, ಪು. ೯೧)

ಎಂತಹ ಚುಟುಕು. ಮನುಷ್ಯ ಆಸೆ-ಆಕಾಂಕ್ಷೆಗಳಿಗೆ ಇತಿ-ಮಿತಿಯೆಂಬುದೇ ಇಲ್ಲ. ತಾನು ಬಾಳಲು ಇತರರು ಹಾಳಾದರು ಯೋಚನೆಯಿಲ್ಲ. ಅದರಲ್ಲೂ ಈ ದಿನ ನಾವು ಉಸಿರಾಡಲು ದಾರಿದೀಪದಂತೆ ಕಂಗೊಳಿಸುತ್ತಿರುವ ಈ ಮರ-ಗಿಡಗಳು ತಮ್ಮ ದುಃಖವನ್ನು ಹೇಳಿಕೊಳ್ಳುವುದಲ್ಲದೆ, ಮನುಷ್ಯನನ್ನು ದೂಷಿಸುತ್ತಿವೆ. ಈ ದೂಷಣೆ ಖಂಡಿತವಾಗಿಯೂ ಮನುಷ್ಯನ ಜೀವನವನ್ನು ಕೊನೆಗೊಳಿಸುತ್ತದೆ. ಉದಾಹರಣೆಗೆ ಹೇಳುವುದಾದರೆ ಪ್ರಸ್ತುತದಲ್ಲಿ ರಸ್ತೆಗಳ ಅಗಲೀಕರಣದಿಂದಾಗಿ ಎಷ್ಟೋ ಮರಗಳು ಪ್ರಾಣತೆತ್ತವು. ಇಂತಹ ಪ್ರಾಣತೆತ್ತವುಗಳ ಮೇಲೆ ಇಂದು ಮನುಷ್ಯ ರಸ್ತೆ, ಮನೆ, ಕೈಗಾರಿಕೆ ಇವೇ ಮೊದಲಾದವುಗಳೆಂಬ ಸೌಧದ

ನಿರ್ಮಾಣಮಾಡಿ ತನ್ನ ವಿನಾಶವನ್ನು ತಾನೆ ಬೇಗನೆ ಕಂಡುಕೊಳ್ಳುವುದರಲ್ಲಿ ಯಾವುದೇ ಸಂಶಯವಿಲ್ಲ.

ಬದುಕಿನ ನಾನಾಮುಖಗಳಿಗೆ ಕನ್ನಡಿ ಹಿಡಿಯಲು ಅಕಬರ ಅಲಿ ಅವರ ನಾಲ್ಕೂ ನೂರಕ್ಕೂ ಚುಟುಕುಗಳು ಸಮಾಜದ ಕನ್ನಡಿಯಂತಿದೆ. ಇವರ ಒಂದೊಂದು ಚುಟುಕುಗಳು ನುಡಿಮುತ್ತುಗಳು ಎಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ಸಮಾಜದ ಓರೆ-ಕೋರೆಗಳನ್ನು ಅದ್ಭುತವಾಗಿ ವರ್ಣಿಸುವುದರ ಮೂಲಕ, ಛಡಿ ಏಟನ್ನು ಸಹ ನೀಡುತ್ತಿದ್ದಾರೆ.

**ಲಕ್ಷಾಧೀಶನಾಗಬೇಕೆ?**

**ಬೆಳಗಾಗುವುದರಲ್ಲಿ ಭಾರಿ ಲಕ್ಷಾದೀಶ**
**ನಾಗಲಿಕೆ ಇಹುದೊಂದು ಸರಳದಾರಿ;**
**ಸಾಧ್ಯವಿರೆ ಕನ್ನಕೊರೆ, ಕಳ್ಳಪೇಟೆಯಲ್ಲಿ ಮೆರೆ,**
**ಇಲ್ಲ ನೋಡೊಮ್ಮೆ ಮಂತ್ರಿಯ ಪಟ್ಟವೇರಿ!**

(ಅಕಬರ ಅಲಿ, ಚುಟುಕುಗಳು, ಪು. ೪೫)

ನಮ್ಮ ಜನರು ಹೀಗೂ ಲಕ್ಷಾಧೀಶರಾಗುತ್ತಾರೆ ಎಂಬುದನ್ನು ಚುಟುಕು ವರ್ಣಿಸುತ್ತಿದೆ. ಲಕ್ಷಾಧೀಶರಾಗಲು ಮನುಷ್ಯ ಎಂತಹ ಅನ್ಯಮಾರ್ಗವನ್ನು ಅವಲಂಬಿಸುತ್ತಿದ್ದಾನೆಂಬುದನ್ನು ಇದು ಕುಟುಕುವುದರ ಮೂಲಕ ತಿಳಿಸುತ್ತಿದೆ. ಸತ್ಯಹರಿಶ್ಚಂದ್ರನ ಕಾಲ ಎಲ್ಲಿಹುದು? ಎಂಬ ಪ್ರಶ್ನೆಯನ್ನು ಈ ದಿನಗಳಲ್ಲಿ ನಮಗೆ ನಾವೆ ಹಾಕಿಕೊಳ್ಳುವಂತಹ ಸನ್ನಿವೇಶ ಬಂದೊದಗಿದೆ.

**ಕೆಸರು – ಮೊಸರು**

**ಕೈ ಕೆಸರಾದರೆ ಬಾಯಿಗೆ ಮಣ್ಣು;**
**ಬಡ ಒಕ್ಕಲಿಗನ ಕರ್ಮಫಲ!**
**ಕೈ ಚಾಲಾಕಿಗೆ ಕೆನೆಕೆನೆ ಮೊಸರು**
**ದಲಾಲಿ ಬದುಕಿನ ಮರ್ಮವಲ!**

(ಅಕಬರ ಅಲಿ, ಚುಟುಕುಗಳು, ಪು. ೮೫)

ಕಷ್ಟಪಟ್ಟು ಕೆಲಸ ಮಾಡುವುದರಿಂದ ಒಳ್ಳೆಯ ಪ್ರತಿಫಲ ದೊರೆಯುವುದರಲ್ಲಿ ಯಾವುದೇ ರೀತಿಯ ಸಂಶಯವಿಲ್ಲ. ಆದರೆ ಈಚಿನ ದಿನಗಳಲ್ಲಿ ಇಂತಹ ಕರ್ಮಕ್ಕೆ ಯಾವುದೇ ಬೆಲೆ ದೊರೆಯುತ್ತಿಲ್ಲ. ಕೈ ಚಾಲಾಕಿತನದಿಂದ ಬದುಕನ್ನು ಉಜ್ವಲಗೊಳಿಸಿ-ಕೊಳ್ಳುತ್ತಿದ್ದಾರೆ, ಆದರ ಅದು ಶಾಶ್ವತವಾಗಿರುವುದಿಲ್ಲ. ಹೀಗೆ ಹಲವಾರು ಕವಿಗಳ ಒಂದೊಂದು ಚುಟುಕುಗಳೂ ಕೂಡ ಪ್ರತ್ಯಕ್ಷ ಪರೋಕ್ಷವಾಗಿ ನ್ಯೂನತೆಯನ್ನು ಎತ್ತಿಹಿಡಿಯುವುದರಲ್ಲಿ ಸ್ಥಾನವನ್ನು ಪಡೆದುಕೊಂಡಿದೆ.

ದಿನಕರ ದೇಸಾಯಿಯವರು ಚೌಪದಿಯ ರಚನೆಯ ಮೂಲಕವೇ ಪ್ರಖ್ಯಾತಿಯನ್ನು ಪಡೆದಂತಹ ಕವಿ. 'ವಿಚಿತ್ರರೋಗ'ವೆಂಬ ಚೌಪದಿಯ ರಚನೆಯಲ್ಲಿ ಮನುಷ್ಯನ ಕೀರ್ತಿಯು ನೀಡುವಂತಹ ತೊಂದರೆಯನ್ನು ಗಮನಿಸಬಹುದಾಗಿದೆ.

**ವಿಚಿತ್ರ ರೋಗ**

**ಒಂದು ದಿನವೂ ಬಿಡದೆ ನನಗೆ ತಲೆನೋವು**
**ಪಿತ್ತವೇರಿದ ಹಾಗೆ; ನೆತ್ತಿಯಲಿ ಕಾವು**
**ವೈದ್ಯ ನುಡಿದನು ಕಾರಣವ ಕೇಳಿದಾಗ**
**ಕೀರ್ತಿ ಕಳಸದ ಭಾರದಿಂದ ಈ ರೋಗ** (ದಿನಕರನ ಚೌಪದಿ)

ಹೀಗೆ ಮನುಷ್ಯನ ಕೀರ್ತಿ ಪತಾಕೆ ಒಂದು ಕಡೆ ಆತನಿಗೆ ಒಳಿತಾದರೆ, ಮತ್ತೊಂದೆಡೆ ಆತನಿಗೆ ಕೆಡುಕಾಗಿರುತ್ತದೆ. ಕೀರ್ತಿ ಪಡೆಯುವುದು ಮುಖ್ಯವಲ್ಲ. ಅದರ ಹಿಂದಿನ ಜವಾಬ್ದಾರಿ ಅಷ್ಟೇ ಮುಖ್ಯವಾದುದಾಗಿದೆ. ಅದನ್ನು ಈ ಮೇಲಿನ ಚುಟುಕು ಎತ್ತಿತೋರಿಸುತ್ತಿದೆ.

ನಮ್ಮ ದೇಶವು ಸರ್ವಸಮನ್ವಯತೆಯ ದೇಶವಾಗಿದೆ. ಇತ್ತೀಚಿಗಂತೂ ಎಲ್ಲಾ ಕ್ಷೇತ್ರದಲ್ಲು ಇದು ಪ್ರಗತಿಯನ್ನು ಸಾಧಿಸುತ್ತಿದೆ. ಆದರೆ ಪ್ರಗತಿಯ ಜೊತೆಗೆ ಮನುಷ್ಯನ ಸೋಮಾರಿತನವೆಂಬ ಬೀಜ ಮೊಳಕೆಯೊಡೆದು ಮರವಾಗಿ ಬೆಳೆಯುತ್ತಿರುವುದನ್ನು ಈ ಕೆಳಗಿನ ಚೌಪದಿಯಲ್ಲಿ ಗಮನಿಸಬಹುದಾಗಿದೆ.

**ನವ ಭಾರತದ ವೈಶಿಷ್ಟ್ಯ**

**ನವ ಭಾರತದ ಮುಖ್ಯ ವೈಶಿಷ್ಟ್ಯವೇನು?**
**ಪ್ರತಿ ಮೂಲೆಯಲ್ಲಿಯೂ ಉಂಟು ಟೆಲಿಫೋನು**
**ಪಂಚವಾರ್ಷಿಕದಿಂದ ಸಾಧಿಸಿದ್ದೇನು?**
**ತಾರುಣ್ಯದಲ್ಲಿ ಬೆನ್ನಿಗೆ ಬಂತು ಗೂನು** (ದಿನಕರನ ಚೌಪದಿ, ಪು. ೨೪೬)

ಇಂದು ಮನುಷ್ಯ ತಂತ್ರಜ್ಞಾನದಲ್ಲಿ ಏನೆಲ್ಲಾ ಸಾಧನೆಯನ್ನು ಮಾಡುತ್ತಿದ್ದಾನೆ. ಈ ಆವಿಷ್ಕಾರ, ಸಂಶೋಧನೆಯ ಜೊತೆಗೆ ತನ್ನ ಆರೋಗ್ಯ, ತನ್ನ ಜೀವನದ ಪರಿಜ್ಞಾನವೇ ಇಲ್ಲದಂತಾಗಿ ಹೋಗಿದೆ. ಆಮೇಲೆ ಇದು ಏನು ಸಾಧಿಸಿದರೇನು ಫಲ ಮನುಷ್ಯನಿಗೆ ಆರೋಗ್ಯ ಭಾಗ್ಯವೇ ಇಲ್ಲದ ಮೇಲೆ ಎಂಬುದನ್ನು ಈ ಚುಟುಕುವಿನ ಮೂಲಕ ಸಮರ್ಥಿಸಿದ್ದಾರೆ.

ದಿನಕರ ದೇಸಾಯಿಯವರು ಈ ಚುಟುಕು ಎಂಬುದು ಹೇಗಿರುತ್ತದೆಂಬುದನ್ನು ತಿಳಿಸುವುದರ ಮೂಲಕ ಚುಟುಕುವಿನ ಪ್ರಕ್ರಿಯೆಯನ್ನು ನಿರೂಪಿಸಿದ್ದಾರೆ.

**ಚುಟುಕದ ವಿಧಾನ**

**ಬರಿ ನಾಕು ಚೆಂಬಿನಲಿ ಮಾಡಿದರೆ ಸ್ನಾನ**
**ಇದಕೆನ್ನುವರು ಚುಟುಕ ಬರೆಯುವ ವಿಧಾನ**
**ಅತ್ಯಲ್ಪ ನೀರಿನಲಿ ಮಾಡಿದರು ಸ್ನಾನ**
**ರಾಡಿ ಹೊರ ಬೀಳುವುದು, ಬೇಡ, ಅನುಮಾನ**

(ದಿನಕರನ ಚೌಪದಿ, ಪು. ೩೧೦)

ಚುಟುಕು ಚಿಕ್ಕದಾಗಿದ್ದರೂ ಅದರ ವಿಡಂಬನೆ ಮಾತ್ರ ವಿಮರ್ಶೆಗೆ ಒಳಪಡಿಸು-ವಂತದ್ದು. ಹೀಗೆ ಅಂಟಿಕೊಂಡಿರುವ ಕೊಳೆಯನ್ನು ತೆಗೆಯುವಂತಹ ಶಕ್ತಿ, ಯುಕ್ತಿ ಈ ಚುಟುಕುವಿಗೆ ಇದೆಂಬುದನ್ನು ಪ್ರತಿನಿಧಿಸಿದ್ದಾರೆ.

ಡಾ. ಚನ್ನವೀರ ಕಣವಿಯವರು ಸಹ ಚುಟುಕು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದಂತಹ ಸ್ಥಾನವನ್ನು ಪಡೆದಿದ್ದಾರೆ. ಇವರ ಕೃಷಿಕ್ಷೇತ್ರವು ಅದ್ಭುತವಾದದ್ದು. ಸಾವು-ಸಂಸ್ಕಾರಗಳು ಮನುಷ್ಯನ ಜೀವನದಲ್ಲಿ ಸಹಜವಾಗಿ ನಡೆಯುವಂತಹ ಪ್ರಕ್ರಿಯೆಯಾಗಿದೆ. ಆದರೂ ಸಾವು-ಸಂಸ್ಕಾರಗಳು ಮನುಷ್ಯನ ಚೀತ್ಕಾರವನ್ನು ಹೊರಹೊಮ್ಮಿಸುವಂತದ್ದಾಗಿದ್ದು, ಅದರ ನಿಲುವನ್ನು ಈ ಕೆಳಗಿನ ಚುಟುಕುವಿನಲ್ಲಿ ತಿಳಿಸಿದ್ದಾರೆ.

**ಸಾವು – ಸಂಸ್ಕಾರ**

**ದೊಡ್ಡವರ ಆಕಸ್ಮಿಕ ಸಾವು**
**ಅತ್ಯಂತ ಘೋರವಾದದ್ದು**
**ಆದರೆ ಒಮ್ಮೊಮ್ಮೆ ಅದಕ್ಕೂ ಘೋರ**
**ಅವರ ಅಂತ್ಯ ಸಂಸ್ಕಾರ** (ಕಣವಿ ಚುಟುಕುಗಳು, ಪು. ೧೭)

ಸಾವು-ಸಂಸ್ಕಾರವೆಂಬುದು ಮಾತಿನ ಮೂಲಕ ತೃಣವಾದರೂ ಇವುಗಳು ನೀಡುವ ದುಃಖದುಮ್ಮಾನಗಳಿಗೆ ಬೆಲೆಕಟ್ಟಲು ಸಾಧ್ಯವಿಲ್ಲ. ಜೊತೆಗೆ ಅದರ ಪರ್ಯಾಯರೂಪವು ಇಲ್ಲ. ಆದ್ದರಿಂದಾಗಿ ಇದು ಘೋರವಾದದ್ದಾಗಿದೆ.

ಕಣವಿಯವರ ಚುಟುಕು ಒಂದೊಂದು ಗಣಿ ಇದ್ದ ಹಾಗೆ. ನೋಟ ಸರಳ, ಅದರ ಸೌಂದರ್ಯ ಅದರಲ್ಲೂ ಒಳ ಸೌಂದರ್ಯ ಅಗಾಧತೆಯನ್ನು ಒಳಗೊಂಡಿದೆ.

**ಸಂಸ್ಥೆ – ಸಂತೆ**

**ಆಡೆ, ನೀನು ಮುಟ್ಟದಿರುವ**
**ಗಿಡವೇ ಇಲ್ಲ, ಅಂತೆಯೆ**
**ನೋಡು ನಾವು ಕಟ್ಟುತ್ತಿರುವ**
**ಸಂಸ್ಥೆಯೆಲ್ಲ ಸಂತೆಯೆ** (ಕಣವಿ ಚುಟುಕುಗಳು, ಪು. ೨೫)

ಈವತ್ತಿನ ಪ್ರತಿಯೊಂದು ಸಂಸ್ಥೆಯು ದೊಡ್ಡ ಸಂತೆಯೇ ಆಗಿದೆಂಬುದಕ್ಕೆ ನೈಜಸಾಕ್ಷಿಯಾಗಿ ನಮ್ಮ ಎಲ್ಲಾ ಸಂಸ್ಥೆಗಳು ಕೂಡ ಇವೆ. ಒಂದಕ್ಕಿಂತ ಒಂದು ಹೆಚ್ಚು ಎಂಬುವ ರೀತಿಯಲ್ಲಿ ತಮ್ಮ ಸ್ಪರ್ಧೆಯನ್ನು ತೋರಿಸುತ್ತಿವೆ.

ಕನ್ನಡವನ್ನೇ ಉಸಿರನ್ನಾಗಿಸಿಕೊಂಡ ಚಂಪಾರವರು ತಮ್ಮ ಚುಟುಕುಗಳಲ್ಲಿ ರಾಜಕೀಯ, ಸಾಮಾಜಿಕ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಇರುವ ಅವ್ಯವಸ್ಥೆಯನ್ನು ತಮ್ಮ ನೇರನುಡಿಯ ಮೂಲಕ ತೆಗಳಿದ್ದಾರೆ.

**ಪ್ರಜೆ – ಪ್ರಭು**

**ಪ್ರಜಾ ಪ್ರಭುತ್ವದಲ್ಲಿ**
**ಪ್ರಜೆಗೆ ಇರಲೇಬೇಕು**
**ನಿರಂತರ ಜಾಗೃತಿ**
**ಪ್ರಭುಗಳಿಗೆ ಮಾತ್ರ ಇದೆ**
**ಸ್ವಲ್ಪ ರಿಯಾಯಿತಿ:**
**ಕುಂತಕುಂತಲ್ಲಿ ತೂಕಡಿಸಲಿಕ್ಕೆ**
**ಕಂಡಕಂಡಲ್ಲಿ ಮಲಗಲಿಕ್ಕೆ** (ಚಂಪಾ ಚುಟುಕುಗಳು, ಪು. ೫೨)

ಇದೇ ನಮ್ಮ ಅವ್ಯವಸ್ಥೆ. ಮತ ಚಲಾಯಿಸಿ ನಮ್ಮ ಪ್ರತಿನಿಧಿಯಾಗಿ ನಾವು ಕಳುಹಿಸಿದರೆ ಅವರು ಮಾಡುವ ದೊಡ್ಡ ಕಾರ್ಯ ತೂಕಡಿಕೆ. ಇಂತಹ ಮಹಾನುಭಾವರಿಗೆ ನಿದ್ರೆ ಎಂಬ ದೇವತೆ ರಾರಾಜಿಸುತ್ತಿರುತ್ತಾಳೆ. ಇವರೆಲ್ಲ ನಮ್ಮ ಪ್ರತಿನಿಧಿಗಳಾಗಲು ಅನಾಲಾಯಕ್ಕಾಗಿರುವ ಮನುಷ್ಯರು. ಆದ್ದರಿಂದಲೇ ಇವತ್ತು ಮತದಾನಕ್ಕೆ ಯಾವುದೇ ಬೆಲೆ ಎಂಬುದಿಲ್ಲ. ಮತ ಹಾಕುವುದಕ್ಕಿಂತ ಕೈಕಟ್ಟಿ ಕೂರುವುದು ಎಷ್ಟೋ ಒಳಿತಾಗಿದೆ.

**ಉಪವಾಸ**

**ಕುಂತು ಮಾಡಿದರೆ ಕುಂತೋಪವಾಸ**
**ಕಂತಿನಲ್ಲಿ ಮಾಡಿದರೆ ಕಂತೋಪವಾಸ**
**ಮಲಗಿ ಮಾಡಿದರೆ ಶಯನೋಪವಾಸ**
**ಮಲಗಿಯೇ ಬಿಟ್ಟರೆ ಕೈಲಾಸವಾಸ** (ಚಂಪಾ ಚುಟುಕುಗಳು, ಪು. ೬೨)

೨೧ನೇ ಶತಮಾನ ಬಂದರು ನಮ್ಮ ಭಾರತದಲ್ಲಿ ಉಪವಾಸ ವ್ರತಗಳಿಗೆ ಕೊರತೆಯೇ ಇಲ್ಲ. ಇಂದಿಗೂ ಇಂತಹ ವ್ರತಗಳು ಅಧಿಕವಾಗಿದ್ದು ದೇಹದಲ್ಲಿ ಅನಾರೋಗ್ಯ ಮೂಡಿದರು ಲೆಕ್ಕಿಸದೇ ವ್ರತಕ್ಕೆ ಪ್ರಾಮುಖ್ಯತೆಕೊಡುತ್ತಾರೆ. ಆದರೆ ನಮ್ಮ ಜನತೆಗೆ ವ್ರತಕ್ಕಿಂತ ಅವರು ತನ್ನ ಕೆಲಸದಲ್ಲಿ ತೋರುವ ಪರಿಶ್ರಮದ ಫಲವಾಗಿ ವೃತ ಫಲಿಸುತ್ತದೆಂಬುದನ್ನು ಮರೆತಿದ್ದಾರೆ.

ಚಂಪಾರವರು ವಿವಿಧ ಭಂಗಿಯ ಉಪವಾಸವನ್ನು ತಿಳಿಸುತ್ತಾ ಅದರ ನಿಸ್ಸಾರತೆಯನ್ನು ವ್ಯಕ್ತಪಡಿಸಿದ್ದಾರೆ.

ನಿವೃತ್ತ ತಹಶೀಲ್ದಾರರಾದ ಧ್ರುವರಾಜ ಜೋಶಿಯವರು ಸಶಕ್ತವಾದ ಚುಟುಕುಗಳ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದಾರೆ.

**ಪತ್ರಿಕೆ**

**ನಾನು ಬಸ್ಸಿನಲ್ಲಿ ಪತ್ರಿಕೆ ಕೊಂಡೆ**
**ಪೇಪರ್ ಮಾರುವ ಹುಡುಗನಿಂದ**
**ನನ್ನ ಪಕ್ಕ ಕುಳಿತವ ಕೂಡಲೆ**
**ಕನ್ನಡಕ ತೆಗೆದ ತನ್ನ ಜೇಬಿನಿಂದ!**

(ಧ್ರುವರಾಜ ಜೋಶಿ ಅವರ ಆಯ್ದ ಚುಟುಕುಗಳು, ಪು. ೧೧)

ಹೀಗೆ ನಮ್ಮ ಜನರು ಕಂಡವರ ಹಣದಲ್ಲಿ ಬಿಟ್ಟಿಯಾಗಿ ಪತ್ರಿಕೆ ಓದುವ, ಇಂತಹ ಜಿಪುಣತನದಿಂದ ಕನ್ನಡ ಪತ್ರಿಕೆಗಳ ಪ್ರಸಾರದ ಸಂಖ್ಯೆ ಹೆಚ್ಚಿಸಿಕೊಳ್ಳದಿರುವುದು ಮಂಕಾದ ಗಂಭೀರ ವಿಷಯಗಳನ್ನು ನವಿರಾದ ಹಾಸ್ಯ ಚಾಟಿಯಿಂದಲೇ ಕೊಟ್ಟಂತಹ ಏಟುಗಳು ಅದ್ಭುತವಾಗಿದೆ. ಧ್ರುವರಾಜ ಜೋಶಿಯವರು ಆಷಾಢಭೂತಿಗಳಾಗಿ ಕಾರ್ಯ-ನಿರ್ವಹಿಸುತ್ತಿರುವವರು ಎಂತಹ ಅನ್ಯಾಯ ಮೋಸವನ್ನು ಮಾಡುತ್ತಿದ್ದಾರೆಂಬುದನ್ನು ವಿಡಂಬಡಿಸಿದ್ದಾರೆ.

**ಆಷಾಢಭೂತಿಗಳು**

**ತೊಟ್ಟಿರುವುದು ಶುದ್ಧವಾದ**
**ಕಾದಿ, ಖಾದಿ, ಖಾಕಿ ಉಡುಗೆ**
**ಇವರು ಸದಾ ಮಾಡುವುದು**
**ಅನ್ಯಾಯ, ಹಿಂಸೆ ಸುಲಿಗೆ**

(ಧ್ರುವರಾಜ ಜೋಶಿ ಅವರ ಆಯ್ದ ಚುಟುಕುಗಳು, ಪು. ೧೧)

ಹೀಗೆ ನೋಡುವುದಕ್ಕೆ ಮಾತ್ರ ವಸ್ತ್ರ. ಆದರೆ ವಸ್ತ್ರದ ಹಿಂದಿನ ತಂತ್ರಗಾರಿಕೆಗಳು ಸಮಾಜವನ್ನು ಕಿತ್ತುತಿನ್ನುವ ನರಭಕ್ಷಕರು ಎಂದು ಹೇಳಿದರೆ ತಪ್ಪಾಗಲಾರದು.

ಡಾ. ಪಂಚಾಕ್ಷರಿ ಹಿರೇಮಠರವರು ಪ್ರೀತಿಯ ನೆಲೆಯಲ್ಲಿ ಚುಟುಕನ್ನು ರಚಿಸಿ, ಜೀವನದಲ್ಲಿ ಪ್ರೀತಿ ಹೇಗೆ ಪ್ರಮುಖ ಪಾತ್ರವಹಿಸುತ್ತದೆಂಬುದನ್ನು ತಿಳಿಸಿದ್ದಾರೆ.

**ಎಲ್ಲಿ ಹೋಗುವೆ ಹೀಗೆ ನನ್ನವಳೆ**
**ಅಲ್ಲಿ ಇಲ್ಲಿ ಎಲ್ಲಾ ಹೋಗದೆ,**

**ನಿನ್ನ ಪೂಜಿಸಿದವನ ಎದೆಯಾಳದಲ್ಲಿ**

**ನೆಲೆನಿಲ್ಲು ಶಾಶ್ವತವಾಗಿ, ಓ! ಕೆಳದಿ!**

(ಡಾ. ಪಂಚಾಕ್ಷರಿ ಹಿರೇಮಠರ ಆಯ್ದ ಚುಟುಕುಗಳು)

ಹೆಣ್ಣು ಸಮಾಜದ ಕಣ್ಣು. ಒಲಿದರೆ ನಾರಿ ಮುನಿದರೆ ಮಾರಿ. ಆದ್ದರಿಂದ ಅವಳಿಲ್ಲದೆ ಜಗತ್ತನ್ನು ನೆನಪಿಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದಾಗಿ ಅವಳ ಪ್ರೀತಿಗೆ ಸರಿಸಮಾನವಾದುದು ಇಲ್ಲ. ಆದ್ದರಿಂದಲೇ ಪ್ರತಿಯೊಬ್ಬ ಪುರುಷನ ಯಶಸ್ಸಿನ ಹಿಂದೆ ಹೆಣ್ಣು ಇರುತ್ತಾಳೆಂಬುದು ಸರ್ವಕಾಲಿಕ ಸತ್ಯವಾದುದಾಗಿದೆ.

ಅರವಿಂದ ಮಾಲಗತ್ತಿಯವರು ಸಹ ಚುಟುಕು ಕವಿಯಾಗಿದ್ದು, ಇವರ ಚುಟುಕುಗಳಲ್ಲಿ ಪ್ರಾದೇಶಿಕ ಭಾಷೆಯ ಪ್ರಯೋಗಗಳಿವೆ. ಅಲ್ಲದೆ ಜೀವನ ಮಾರ್ಗದರ್ಶನಾದರ್ಶಗಳು ಚುಟುಕು ಸಾಹಿತ್ಯದ ಹುರುಳು ಹೂರಣಗಳೆಂಬುದನ್ನು ಇಲ್ಲಿನ ಚುಟುಕುಗಳು ಸಾಬೀತುಪಡಿಸುತ್ತದೆ.

**ಕಟ್ಟಳೆ ಕಾನೂನು ವಿಧಿಗಳನ್ನು**

**ದುರ್ಬಲರು**

**ಸಬಲರ ಮೇಲೆಯೇ ಹೇರಿ**

**ಪರಾಕ್ರಮಿಗಳಾಗುತ್ತಾರೆ!**

(ಡಾ. ಅರವಿಂದ ಮಾಲಗತ್ತಿ ಅವರ ಆಯ್ದ ಚುಟುಕುಗಳು, ಪು. ೪೧)

ಹೀಗೆ ಇಂತಹ ಚಾಣಕ್ಯತೆಯ ಜನರೂ ಸಹ ಇಲ್ಲಿದ್ದಾರೆ. ಆದ್ದರಿಂದಲೇ ಜಗತ್ತೆಂಬುದು ಮಸಾಲೆಭರಿತವಾಗಿದೆ. ಅಂದರೆ ಕೆಟ್ಟವರು, ಒಳ್ಳೆಯವರು, ಎರಡನ್ನೂ ಒಳಗೊಂಡವರು ಹೀಗೆ ವಿವಿಧ ರೀತಿಯ ಜನರು ಇದ್ದಾರೆ.

**ಹೊಳಿ ದಾಟಬೇಕು ಅಂದ್ರ**

**ದೋಣಿಗೆ ತೂತ ಇರಬಾರದು**

**ಜೀವನ ಜೈಯಿಸಬೇಕಂದ್ರ**

**ಸಂಸಾರದಾಗ ಸಂಶಯ ಬರಬಾರದು**

(ಡಾ. ಅರವಿಂದ ಮಾಲಗತ್ತಿ ಅವರ ಆಯ್ದ ಚುಟುಕುಗಳು, ಪು. ೪೧)

ಸಂಶಯವೆಂಬುದು ಮಾನವನಿಗೆ ಇರುವ ಅಂಟುಜಾಡ್ಯ. ಇದು ಖಂಡಿತಾ ಇರದಿದ್ದರೆ ಮನುಷ್ಯನ ಬಾಳು ಹಸನಾಗುವುದರಲ್ಲಿ ಯಾವುದೇ ರೀತಿಯ ಸಂಶಯವಿಲ್ಲ. ಆದ್ದರಿಂದಲೇ ಸಂಶಯವೆಂಬುದು ಶತ್ರುವಿದ್ದ ಹಾಗೆ, ಈ ಶತ್ರುವಿನಿಂದ ದೂರವಿರುವುದು ಒಳಿತಾಗಿದೆ.

ಚುಟುಕುವಿನ ರಚನೆಯಲ್ಲಿ ಕೇವಲ ಪುರುಷರು ಮಾತ್ರವಲ್ಲದೆ ಸ್ತ್ರೀಯರು ಸಹ ಇದರ ರಚನೆಯಲ್ಲಿ ತೊಡಗಿದ್ದಾರೆ. ಇದಕ್ಕೆ ಉದಾಹರಣೆ ಬಿ.ಟಿ.ಲಲಿತಾ ನಾಯಕ್‌ರವರಾಗಿದ್ದಾರೆ. ಇವರು ಓದಿದ್ದು ಎಂಟನೇ ತರಗತಿಯಾದರು, ಸ್ವಲ್ಪ ಹಿಂದಿ ಕಲಿಕೆಯ ಜೊತೆಗೆ ಏರಿದ್ದು ವಿಧಾನಸೌಧದಲ್ಲಿ ಮಂತ್ರಿಪದವಿಯವರೆಗೆ ಏರಿ ತಮ್ಮ ಚುಟುಕುಗಳಲ್ಲಿ ವಿಸ್ಮಯ, ಆಶಾವಾದತನ, ಸಮ್ಮುದಗಳು ಇವೇ ಮುಂತಾದವುಗಳು. ಕಂಡುಬರುತ್ತದೆ.

**ಬೀದಿ ಹಸು**

**ಮೈತುಂಬ ದೇವತೆಗಳಂತೆ**
**ಹೆಸರು ಪುಣ್ಯಕೋಟಿ**
**ಆದರೇನು**
**ಪಾಪಿ ಹೊಟ್ಟೆಗೆ**
**ಶಹರದ ಕಸದ ತೊಟ್ಟಿಯೇ ಗತಿ**

(ಬಿ.ಟಿ. ಲಲಿತಾ ನಾಯಕ್ ಚುಟುಕುಗಳು)

ಹಸುವನ್ನು ದೇವರೆಂದು ಪೂಜಿಸುವ ಈ ನಾಡಿನಲ್ಲಿ ಇತ್ತೀಚಿನ ದಿನಗಳಲ್ಲಿ ಮೂಕಪ್ರಾಣಿ ಎಂಬುದನ್ನು ಲೆಕ್ಕಿಸದೆ ಮಾನವ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಗೋ.ಮಾಂಸವನ್ನು ನಿಷೇಧಿಸಿದರೂ ಮಾನವನ ಜಿಹ್ವಾಚಾಪಲ್ಯಕ್ಕೆ ಗುರಿಯಾಗುತ್ತಿರುವ ಮೂಕಪ್ರಾಣಿ ನಮ್ಮ ಗೋವು ಆಗಿದೆ. ಎಂತಹ ದುಃಸ್ಥಿತಿ ಗೋ ಮಾತೆಗೆ ಬಂದಿದೆ ಎಂಬುದು ದುರ್ಗತಿಯ ವಿಷಯವಾಗಿದೆ.

**ದಾಹ**

**ತಂತ್ರಜ್ಞಾನದ ದಾಹ ಮಿತಿಮೀರಿ**
**ನೆಲದ ಗರ್ಭಕ್ಕೆ ಕೊಳವೆಗಳು ತೂರಿ**
**ಬರಡಾಗಿಸಿತು ಒಳ ಜಲದ ಸೆಲೆ ಹೀರಿ ಹೀರಿ**

(ಬಿ.ಟಿ. ಲಲಿತಾ ನಾಯಕ್ ಚುಟುಕುಗಳು, ಪು. ೫೨)

ಮನುಷ್ಯನ ಸ್ವಾರ್ಥಕ್ಕೆ ಬಲಿಯಾಗದ ಯಾವುದೇ ಚರಾಚರ ವಸ್ತುಗಳಿಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಈತನ ದಾಹ ನಿಲ್ಲಲ್ಲ.

**ಭೂತಾಯಿ**

**ನಿನ್ನೊಡಲಲಿ ಎಂತೆಂಥಹ**
**ಪಾಪಿ ಪಾತಕಿಗಳು!**
**ಇವರಿಗಿಲ್ಲ ತಕ್ಕ ಶಿಕ್ಷೆ**

**ನಿನ್ನ ಮಕ್ಕಳೇ ಎಲ್ಲರೂ ಎಂಬುದು**
**ಖಾತ್ರಿಯಾಯ್ತು ಬಿಡು**
**ಇಲ್ಲವಾದರೆ ಸಿಗುತ್ತಿತ್ತೇ**
**ಈ ಪರಿಯ ಕ್ಷಮಾಭಿಕ್ಷೆ**

(ಬಿ.ಟಿ. ಲಲಿತಾ ನಾಯಕ್ ಚುಟುಕುಗಳು, ಪು. ೨೧)

ಭೂತಾಯಿಯ ಮಹತ್ವವನ್ನು ಎಷ್ಟು ಹೇಳಿದರೂ, ಎಷ್ಟು ಹೊಗಳಿದರೂ ಅದಕ್ಕೆ ಸರಿಸಮವಾದುದು ಯಾವುದೂ ಇಲ್ಲ.

ಹೀಗೆ ಹಲವಾರು ಕವಿಗಳು ಚುಟುಕು ಸಾಹಿತ್ಯವನ್ನು ರೂಪಿಸಿ, ಚುಟುಕುವಿನ ಸಾರವನ್ನು ಎತ್ತಿಹಿಡಿದಿದ್ದಾರೆ.

## ಅ. ಡಾ. ಸಿ.ಪಿ.ಕೆ ಅವರ ಚುಟುಕುಗಳ – ವಿವಿಧ ನೆಲೆಗಳು

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಚುಟುಕು ಕಣ್ಮಣಿಗಳಲ್ಲಿ ಡಾ. ಸಿಪಿಕೆಯವರು ಒಬ್ಬರಾಗಿದ್ದಾರೆ. ಹಲವಾರು ಚುಟುಕುಗಳನ್ನು ವಿವಿಧ ನೆಲೆಯಲ್ಲಿ ರಚಿಸುವುದರ ಮೂಲಕ ಡಾ. ಸಿ.ಪಿ.ಕೆ.ಯವರು ಸಾಹಿತ್ಯಕ್ಷೇತ್ರದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಹೀಗಾಗಿ ಅವರ ಚುಟುಕುಗಳನ್ನು ವಿವಿಧ ನೆಲೆಗಳಾಗಿ ವರ್ಗೀಕರಿಸಿ ವಿಶ್ಲೇಷಿಸಲಾಗಿದೆ.

### ೧.೧. ಸಾಮಾಜಿಕ ನೆಲೆಯ ಚುಟುಕುಗಳು

ಡಾ. ಸಿ.ಪಿ.ಕೆ. ಅವರ ಚುಟುಕುಗಳು ಸಾಮಾಜಿಕ ಚಿಂತನೆಯ ನೆಲೆಯಲ್ಲಿ ಹಾಗೂ ಸಾಮಾಜಿಕ ಚೌಕಟ್ಟಿನಲ್ಲಿ ಸೃಷ್ಟಿಗೊಂಡಿದೆ. ಆಡುಮುಟ್ಟದ ಸೊಪ್ಪಿಲ್ಲ, ಚುಟುಕು ನಿರೂಪಿಸದೆ ಇರುವ ಸಾಮಾಜಿಕ ವಿಷಯಗಳೇ ಇಲ್ಲವೆನ್ನಬಹುದು. ಚುಟುಕುಗಳು ಸಮಾಜವನ್ನು, ಎಲ್ಲರನ್ನೂ ಪರಿಶೀಲಿಸುವ ಸಾಮಾಜಿಕ ಚಿಂತಕನೆನಿಸಿದ್ದಾನೆ. ಸಮಾಜದಲ್ಲಿರುವ ಶೋಷಣೆ ದೌರ್ಜನ್ಯ, ದುರಾಸೆ, ವಂಚನೆ, ಪ್ರತ್ಯೇಕತೆ, ಭ್ರಷ್ಟಾಚಾರ, ಬಡತನ, ಅಂಧಾನುಕರಣೆ ಇವೇ ಮುಂತಾದಂತಹ ವಿಷಯಗಳನ್ನು ಸಾಮಾಜಿಕ ಚುಟುಕುಗಳು ಪ್ರತಿನಿಧಿಸುತ್ತವೆ. ಹೀಗೆ ಸಿ.ಪಿ.ಕೆ. ಅವರ ಚುಟುಕುಗಳು ಸಮಾಜಕ್ಕೆ ದಾರಿದೀಪದಂತಿವೆ.[೧]

ನಮ್ಮ ಸಮಾಜದಲ್ಲಿ ತ್ರಿವಿಧಗಳು ಕಂಡುಬಂದಿದೆ. ಅವು ಯಾವುವೆಂದರೆ

**ತ್ರಿವಿಧ**

**ನೈತಿಕತೆ ಉತ್ತಮ;**
**ವ್ಯಾವಹಾರಿಕತೆ**
**ಮಧ್ಯಮ;**
**ಭ್ರಷ್ಟಾಚಾರ ಅಧಮ!** (ಆಲಿಕಲ್ಲು ಹನಿಗವನಗಳು)

---

೧. ಚುಟುಕು ಮಂದಾರ : ವೈದ್ಯ ವಾರ್ತಾ ಪ್ರಕಾಶನ, ೨೦೦೦, ಪು. ೬೦.

ಇವೇ ತ್ರಿವಿಧಗಳು. ನೈತಿಕತೆಯ ಕೊರತೆ ಈ ದಿನಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ವ್ಯವಹಾರವಿಲ್ಲದೆ ಜೀವನವೇ ಇಲ್ಲವೆಂದು ಹೇಳಬಹುದು. ಭ್ರಷ್ಟಾಚಾರ ತುಂಬಿ–ತುಳುಕಾಡುತ್ತಿದೆ. ಆದ್ದರಿಂದಾಗಿ ಈ ಮೂರು ವಿಧಗಳು ಸಮಾಜದಲ್ಲಿ ತನ್ನದೇ ಆದಂತಹ ನೆಲೆಯನ್ನು ಕಂಡುಕೊಂಡು ಭ್ರಷ್ಟಾಚಾರವು ಸಮಾಜದ ವಿನಾಶಕ್ಕೆ ಕಾರಣೀಭೂತವಾಗಿದೆ ಎಂದು ತಿಳಿಸುತ್ತದೆ.

**ಅಂದು–ಇಂದು**

**ಇತಿಹಾಸದ**
**ಎಷ್ಟೋ ಭ್ರಮೆಗಳು**
**ವಿಶೇಷಗಳು**
**ಇಂದಿಗೆ ಕೇವಲ**
**ಅವಶೇಷಗಳು!** (ಆಲಿಕಲ್ಲು ಹನಿಗವನಗಳು, ಪು. ೫೬)

ಇತಿಹಾಸಗಳು ಎಷ್ಟೋ ಅಚ್ಚರಿಗಳು ವಿಶೇಷಗಳಾಗಿ ಪರಿಣಮಿಸಿದೆ. ಆದರೆ ಈ ದಿನಗಳಲ್ಲಿ ಅದರ ಮಹತ್ವ ಉಳಿದವುಗಳು ಎಂಬುದಾಗಿ ಪ್ರಾಶಸ್ತ್ಯ ಪಡೆದುಕೊಂಡಿದೆ. ಅಂದು–ಇಂದಿನ ಇತಿಹಾಸ ಪ್ರಜ್ಞೆಯ ವ್ಯತ್ಯಾಸವನ್ನು ಇಲ್ಲಿ ವಿಡಂಬಿಸಿದ್ದಾರೆ.

**ನಶ್ವರ**

**ಅನಿಸುತ್ತದೆ**
**ಈ ಸುಂದರ ಶರೀರ**
**ಅಲ್ಲ ಕೇವಲ**
**ರಕ್ತ, ಮಾಂಸ, ಮೂಳೆ!**
**ಆದರೇನು? ಇದು**
**ಉಳಿಯುವುದಿಲ್ಲ ನಾಳೆ!** (ಆಲಿಕಲ್ಲು ಹನಿಗವನಗಳು, ಪು. ೫೩)

ಮನುಷ್ಯನ ಜೀವನ, ಸೌಂದರ್ಯ, ದೇಹ ಎಲ್ಲಿಯತನಕ ಶಾಶ್ವತ? ಅದು ಅಶಾಶ್ವತವಾದುದು ಎಂಬುದನ್ನು ಸಿಪಿಕೆಯವರು ವಿಡಂಬಡಿಸಿದ್ದಾರೆ. ಹೀಗೆ ಎಷ್ಟೇ ಬಾಹ್ಯ ಸೌಂದರ್ಯ ಸುಂದರವಾಗಿದ್ದರೂ ಸತ್ತಾಗ ಹೂಳುತ್ತಾರೆ. ಇಲ್ಲವೇ ಧಹಿಸುತ್ತಾರೆ. ಆದ್ದರಿಂದಾಗಿ ಮನುಷ್ಯನ ಜನ್ಮವೇ ನಶ್ವರವಾಗಿದೆ.

**ದೀಪಾವಳಿ**

**ಜ್ಞಾನದ ಬೆಳಕಿಗೆ**
**ಈಗ ವಿಜ್ಞಾನದ**
**ಬೆಳಕೂ ಬೆರೆತ**
**ವಿಚಿತ್ರ** (ಆಲಿಕಲ್ಲು ಹನಿಗವನಗಳು, ಪು. ೨೯)

ಈ ಮೇಲಿನ ಚುಟುಕು ಶೈಕ್ಷಣಿಕ ವ್ಯವಸ್ಥೆಯನ್ನು ಕುರಿತು ಹೇಳುವಂತದ್ದಾಗಿದೆ. ಏಕೆಂದರೆ ಹಿಂದೆ ಅಕ್ಷರಸ್ಥರಾದರೆ ಮಾತ್ರ ಸಾಕಾಗಿತ್ತು. ಆದರೆ ೨೧ನೇ ಶತಮಾನವು ವಿಜ್ಞಾನ ತಂತ್ರಜ್ಞಾನಗಳ ಶತಮಾನವಾಗಿದ್ದು ವಿಜ್ಞಾನದ ಬೆಳಕು ಜ್ಞಾನದ ಜೊತೆ ಬೆರೆತುಕೊಂಡು ಹೋಗುತ್ತದೆಂಬುದನ್ನು ತಿಳಿಸಿದೆ. ಇದರಿಂದಾಗಿ ಇದು ವಿಜ್ಞಾನದ ಮಹತ್ವವನ್ನು ಎತ್ತಿ ಹಿಡಿದಿದೆ.

**ವಿಪರ್ಯಾಸ**

**ಜಗತ್ತಿನಲ್ಲಿ**
**ಎಷ್ಟು ಕೋಟಿ ಜನರಿದ್ದಾರೆ?**
**ಆದರೂ ಪ್ರಿಯನಿಗೆ**
**ತನ್ನ ಪ್ರೇಯಸಿಯ ಹೊರತು**
**ಬೇರೆ ಹೆಣ್ಣಿಲ್ಲ;**
**ಪ್ರೇಯಸಿಗೆ ತನ್ನ**
**ಪ್ರಿಯನ ಹೊರತು**
**ಬೇರೆ ಗಂಡಿಲ್ಲ!** (ಆಲಿಕಲ್ಲು ಹನಿಗವನಗಳು, ಪು. ೨೬)

ಇಂದು ಜಗತ್ತಿನಲ್ಲಿ ಗಂಡು-ಹೆಣ್ಣಿನ ಪ್ರೀತಿಗೆ ಇರುವ ಬೆಲೆ ಬೇರೆ ಯಾವ ಪ್ರೀತಿಗೂ ಇಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ಹೆಣ್ಣು-ಗಂಡುಗಳು ವಯಸ್ಸಿಗೆ ಬಂದಾಗ ಹೆಣ್ಣಿಗೆ ಗಂಡಿನ ಪ್ರೀತಿ, ಗಂಡಿಗೆ ಹೆಣ್ಣಿನ ಪ್ರೀತಿ ಮುಖ್ಯವಾಗಿದೆ. ವಿನಃ ತಂದೆ, ತಾಯಿ, ಸಹೋದರತ್ವ, ಬಂಧುಬಳಗ ಇವೇ ಮೊದಲಾದ ಯಾವುದೇ ಪ್ರೀತಿಗೆ ಪ್ರಾಶಸ್ತ್ಯವಿರುವುದಿಲ್ಲ. ಆದ್ದರಿಂದಲೇ ಪ್ರೀತಿ ಎಂಬ ಎರಡಕ್ಷರ ಈ ಇತ್ತೀಚಿನ ದಿನಗಳಲ್ಲಿ ತನ್ನ ವಿಶಾಲವ್ಯಾಪ್ತಿಯನ್ನು ಕಳೆದುಕೊಂಡಿದೆ.

ಪ್ರತಿಯೊಬ್ಬ ಮನುಷ್ಯನು ತನ್ನ ಜೀವನದಲ್ಲಿ ಒಂದಲ್ಲ ಒಂದು ಸಾಧನೆಯನ್ನು ಮಾಡಬೇಕೆಂಬುದು ಅವರ ಮುಖ್ಯ ಉದ್ದೇಶವಾಗಿದೆ. ಸಾಧನೆಯಿಲ್ಲದ ಜೀವನ ಅಪರಿಪೂರ್ಣವಾಗಿರುತ್ತದೆ. ಆದ್ದರಿಂದ ಕೈಲಾಗದೆಂದು ಕೈಕಟ್ಟಿ ಕುಳಿತರೆ ಸಾಗದು ಕೆಲಸವು ಮುಂದೆ.

**ಸಾಧನೆ**

**ಮನುಷ್ಯ**
**ಆಯುಷ್ಯ**
**ಅಲ್ಲ ಎಂದು**
**ಗೊಣಗಬೇಕಿಲ್ಲ;**
**ಸಂಕಲ್ಪಿಸಿದರೆ,**
**ಕಲ್ಪದಷ್ಟು ಸಾಧಿಸಬಹುದು!** (ಕುಡಿ-ಕಿಡಿ ಹನಿಗವನಗಳು, ಪು.೫೫)

ಮನುಷ್ಯನ ಬದುಕಿನಲ್ಲಿ ತಾಳ್ಮೆಯೇ ಆತನ ಬದುಕಿನ ಜೀವಾಳ ಎಂದು ಹೇಳಿದರೆ ತಪ್ಪಾಗಲಾರದು.

**ತಾಳ್ಮೆ**

**ಬದುಕಿನಲ್ಲಿ**
**ಎಲ್ಲಿಲ್ಲದ,**
**ಎಲ್ಲೆಯಿಲ್ಲದ**
**ತಾಳ್ಮೆ ಬೇಕಿಲ್ಲ; ತುಸು**
**ಇದ್ದರೂ ಲೇಸು!** (ಕುಡಿ-ಕಿಡಿ ಹನಿಗವನಗಳು, ಪು. ೮೫)

ತಾಳ್ಮೆರಹಿತ ಜೀವನ ನಿರರ್ಥಕವಾಗುವುದರಲ್ಲಿ ಸಂಶಯವಿಲ್ಲ. ತಾಳ್ಮೆ ಎಂಬುದು ಪ್ರತಿಯೊಬ್ಬನ ಜೀವನದಲ್ಲಿ ಒಂದು ಉನ್ನತ ಆದರ್ಶಗುಣವಾಗಿದೆ. ತಾಳ್ಮೆ ಎಂಬುದು ನರನಾಡಿಗಳಲ್ಲೆಲ್ಲ ತುಂಬಿಕೊಳ್ಳಬೇಕೆಂಬ ಅವಶ್ಯಕತೆ ಇಲ್ಲ. ಸ್ವಲ್ಪ ಇದ್ದರೂ ತಾಳ್ಮೆ ಅಷ್ಟೇ ಪ್ರಾಮುಖ್ಯತೆಯನ್ನು ಗಳಿಸಿಕೊಳ್ಳುತ್ತದೆ. ತಾಳ್ಮೆಯ ಮಿತಿಯನ್ನು ಇದು ಸೂಚಿಸುತ್ತದೆ.

**ಬಂಧನ**

**ಬದುಕಿಗೆ ನನ್ನನ್ನು**
**ಬಂಧಿಸಿರುವುದು**
**ಹಗ್ಗವಲ್ಲ;**
**ಕೇವಲ ಒಂದು**
**ನೂಲೆಳೆ!** (ಕುಡಿ-ಕಿಡಿ ಹನಿಗವನಗಳು, ಪು. ೧೨೦)

ಬದುಕೆಂಬುದು ಬಂಧನ ಎಂದು ತಿಳಿದುಕೊಳ್ಳುವುದು ಖಂಡಿತ ತಪ್ಪು. ಬದುಕೆಂಬ ಮೂರಕ್ಷರದಲ್ಲಿ ಅಗಾಧವಾದ ಶಕ್ತಿ ಇದೆ. ಆದರೆ ಈ ಶಕ್ತಿಯನ್ನು ಯುಕ್ತಿಯ ಮೂಲಕ ಸಾಧಿಸಬೇಕಷ್ಟೆ. ಆದ್ದರಿಂದ ಒಂದೇ ಒಂದು ಸಣ್ಣ ಯೋಚನೆಯಿಂದ ಆಗುವಂತದ್ದನ್ನು ಮನುಷ್ಯ ಬಂಡೆಯ ರೀತಿಯಲ್ಲಿ ಯೋಚಿಸುತ್ತಿರುತ್ತಾನೆ. ಆದರೆ ಪ್ರಯೋಜನವಿಲ್ಲ. ಆದ್ದರಿಂದಾಗಿ ಜೀವನವೆಂಬುದು ಬಂಧನವಲ್ಲ ನಮ್ಮ ಸಾಧನೆಯನ್ನು ಸಾಧಿಸಲು ಇರುವ ನೈಜಮಾರ್ಗ ಎಂದು ಹೇಳಿದರೆ ತಪ್ಪಾಗಲಾರದು.

**ಪರಂಪರೆ**

**ಒಮ್ಮೆ**
**ಅವಿವೇಕವೆಸಗಿದರೆ,**
**ಅದನ್ನು ಮುಂದುವರಿಸುವುದು**
**ಅನಿವಾರ್ಯವಾಗಬಹುದು!** (ಕುಡಿ-ಕಿಡಿ ಹನಿಗವನಗಳು, ಪು. ೧೨)

ನಮ್ಮ ಸಂಪ್ರದಾಯ, ಸಂಸ್ಕೃತಿಗಳು ಇವೇ ಮೊದಲಾದವುಗಳಲ್ಲಿ ನ್ಯೂನತೆ ಕಂಡುಬಂದರೂ ನಾವು ಅದನ್ನು ಮುಂದುವರೆಸಿಕೊಂಡು ಹೋಗುವುದು ಅವಿವೇಕತನ ಎಂದು ನಮಗೆ ಅನಿಸಿದರೂ, ಅನಿವಾರ್ಯ ಕಾರಣದಿಂದಾಗಿ ಇದನ್ನು ಮುಂದುವರಿಸಬೇಕಾಗುತ್ತದೆ.

**ವ್ಯರ್ಥ**

**ಮನುಷ್ಯ ತನ್ನ ಅಂತರಾತ್ಮವನ್ನು**
**ಮೆಚ್ಚಿಸಬೇಕು, ಇಲ್ಲವೆ,**
**ಜನಜಂಗುಳಿಯನ್ನು**
**ವ್ಯರ್ಥ, ಯಾರನ್ನೂ ಮೆಚ್ಚಿಸದ**
**ಬಾಳು**

(ಸಿಪಿಕೆ ಸಮಗ್ರ ಕವಿತೆ, ಪು. ೨೧೪)

ಮನುಷ್ಯ ಸ್ವಾವಲಂಬಿ ಅಲ್ಲ ಯಾವಾಗಲು ಆತ ಪರಾವಲಂಬಿಯೇ. ಆದ್ದರಿಂದ ಸಾಮೂಹಿಕ ಜೀವಿಯಾದ ಈತ ತನ್ನನ್ನು ತಾನು ಮೆಚ್ಚಿಕೊಳ್ಳುವಂತೆ ಜೀವನ ನಡೆಸಬೇಕು. ಇಲ್ಲವೆಂದರೆ ಪರರನ್ನಾದರೂ ಮೆಚ್ಚಿಸಬೇಕು. ಆಗ ಮಾತ್ರ ಆತನ ಜೀವನ ಸಾರ್ಥಕತೆಯನ್ನು ಪಡೆದುಕೊಳ್ಳುತ್ತದೆಯೇ ವಿನಃ ಇಲ್ಲವೆಂದರೆ ವ್ಯರ್ಥವಾಗುತ್ತದೆ.

**ರೋಗ**

**ವೃದ್ಧಾಪ್ಯದಲ್ಲಿ ರೋಗಗಳು ಬರುವುದು**
**ಸಹಜ;**
**ಒಂದು ವೇಳೆ ಬರದಿದ್ದರೂ**
**ವೃದ್ಧಾಪ್ಯವೇ ಒಂದು ರೋಗ!**

(ಸಿಪಿಕೆ ಸಮಗ್ರ ಕವಿತೆ, ಪು. ೨೧೩)

ಮನುಷ್ಯನಿಗೆ ಕಷ್ಟ ಬರದೆ, ಮರಕ್ಕೆ ಕಷ್ಟ ಬರುತ್ತದೆಯೇ ಎಂಬ ನುಡಿಯಂತೆ ರೋಗವೆಂಬುದು ಮನುಷ್ಯನಿಗೆ ಸಹಜವಾಗಿ ಬರುವಂತದ್ದು. ಯಾವುದೇ ರೋಗ ಬರದಿದ್ದರೂ ಅಂತಿಮವಾಗಿ ಒದಗುವ ವೃದ್ಧಾಪ್ಯವೇ ಒಂದು ದೊಡ್ಡ ರೋಗವಾಗಿದೆ.

ಜೀವನದಲ್ಲಿ ಯೋಜನೆ ಅತ್ಯಾವಶ್ಯಕವಾಗಿದೆ. ಯೋಜನರಹಿತ ಕಾರ್ಯ ವ್ಯರ್ಥವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಆದ್ದರಿಂದಾಗಿ ಯೋಜನೆ ಅದರಲ್ಲೂ ಭಾರತದಲ್ಲಿ ಜನಸಂಖ್ಯೆ ಹೆಚ್ಚುತ್ತಿದ್ದು ಅದರ ನಿಯಂತ್ರಣಕ್ಕೆ ಕುಟುಂಬ ಯೋಜನೆ ಅಗತ್ಯವಾಗಿದೆ.

**ಕುಟುಂಬ ಯೋಜನೆ**

**"ಎರಡು ಬೇಕು, ಮೂರು ಸಾಕು"**
**ಎಂಬ ಘೋಷಣೆ ಅನ್ವಯಿಸತಕ್ಕದ್ದು,**
**ಸಾಹಿತ್ಯಕ್ಕಲ್ಲ,**
**ಜೀವನಕ್ಕೆ** (ಸಿಪಿಕೆ ಸಮಗ್ರ ಕವಿತೆ, ಪು. ೨೧೨)

**ದುರದೃಷ್ಟ**

**'ಅದೃಷ್ಟ' ಎನ್ನುವುದೂ**
**ದುರದೃಷ್ಟದ**
**ಒಂದು ವಿನ್ಯಾಸವೆ**
**ಆಗಬಹುದು!** (ಆಲಿಕಲ್ಲು ಹನಿಗವನಗಳು, ಪು. ೧೩೨)

ಜೀವನದಲ್ಲಿ ಅದೃಷ್ಟ ದುರದೃಷ್ಟಗಳು ಸಹಜವಾಗಿಯೇ ಕಂಡುಬರುತ್ತದೆ. ಅದು ಅವರವರ ನಂಬಿಕೆಯನ್ನು ಅವಲಂಬಿಸಿರುತ್ತದೆ. ಆದರೆ ಅದೇ ಜೀವನವಲ್ಲ. ಅದೃಷ್ಟ ಕೆಡಕನ್ನು ತರಬಹುದು ಇಲ್ಲ ಒಳಿತನ್ನಾದರೂ ಕೂಡ ತರಬಹುದಾಗಿದೆ. ಆದ್ದರಿಂದಲೇ ದುರದೃಷ್ಟ ಅದೃಷ್ಟದ ಒಂದು ವಿನ್ಯಾಸವಾಗಿಯೇ ಇರುತ್ತದೆ.

**ವಿಷ**

**ಹಾವಿನ**
**ವಿಷವಾದರೂ ಬೇಕು;**
**ಔಷಧವಾಗಿ**
**ಅಮೃತವಾದೀತು!**
**ಹಾಲಾಹಲ ಮಾತ್ರ ಬೇಡ!** (ಆಲಿಕಲ್ಲು ಹನಿಗವನಗಳು, ಪು. ೧೩೧)

ಮನುಷ್ಯನ ದ್ವೇಷ ವಿಷಜಂತು ಹಾವಿನ ವಿಷಕ್ಕಿಂತಲೂ ಕಡೆ ಎಂದರೆ ಎಷ್ಟರಮಟ್ಟಿಗೆ ಆತನ ದ್ವೇಷ ಹೇಗಿರುತ್ತದೆಂಬುದನ್ನು ತಿಳಿಸುತ್ತದೆ. ಆದ್ದರಿಂದಲೇ ಮನುಷ್ಯನ ದ್ವೇಷ ತುಂಬಾ ಅಪಾಯಕಾರಿಯಾದುದು ಕೂಡ ಆಗಿದೆ. ಆದ್ದರಿಂದಲೇ ವಿಷಜಂತುವಿನ ವಿಷ ಔಷಧದ ರೂಪದಲ್ಲಿ ಅಮೃತವಾದರು ಮಾನವನ ದ್ವೇಷದ ಹಾಲಾಹಲ ಮಾತ್ರ ಅದಕ್ಕಿಂತಲೂ ಕೆಟ್ಟದ್ದು ಎಂಬುದನ್ನು ಅದು ಸೂಚಿಸುತ್ತದೆ.

**ನೆನಪು**

**ಕೆಲವೊಮ್ಮೆ**
**ಮನದ ಮಲಿನತೆಗೆ**

**ಮತ್ತೆ ಮತ್ತೆ ಮುತ್ತುವ**

**ನೊಣಗಳು**

**ನೆನಪುಗಳು!** (ಆಲಿಕಲ್ಲು ಹನಿಗವನಗಳು, ಪು. ೪೦)

ಮನಸ್ಸು ಎಂಬುದು ಮನುಷ್ಯನ ಪ್ರಮುಖವಾದ ಆಸ್ತಿಗಳಲ್ಲಿ ಒಂಆಗಿದೆ. ನೆನಪು ಇರಬೇಕು. ಆದರೆ ಕಹಿ–ನೆನಪುಗಳು ಇರಬಾರದು. ಜೊತೆಗೆ ನೆನಪು ಎಂಬುದು ನಮ್ಮ ಮಾನಸಿಕ ಸಾಮರ್ಥ್ಯವನ್ನು ಕುಗ್ಗಿಸುತ್ತದೆ. ಆದ್ದರಿಂದಾಗಿ ಒಳ್ಳೆಯ ನೆನಪುಗಳು ನಮ್ಮ ಮನಸ್ಸಿನಲ್ಲಿ ಇರಬೇಕು.

**ಶತ್ರು**

**'ಮಿತ್ರ'ನೆಂದಾರು**

**ಕರೆದರು ಸೂರ್ಯನನ್ನು?**

**ಅಗ್ನಿಯ ಆಪ್ತಮಿತ್ರನಾಗಿ**

**ಸುಡುತ್ತಿದ್ದಾನೆ ಜೀವಜಾಲವನ್ನು**

**ಚಿತೆಯಾಗಿದೆ ಪೃಥ್ವಿ**

**(ನೀರಿನ ಚಿಂತೆ ಬೇರೆ)**

(ಆಲಿಕಲ್ಲು ಹನಿಗವನಗಳು, ಪು. ೧೬)

ಕಣ್ಣಿಗೆ ಕಾಣುವ ದೇವರು ಎಂದು ಸೂರ್ಯನನ್ನು ಆರಾಧಿಸುತ್ತೇವೆ. ಆದರೆ ಸೂರ್ಯ ಅಗ್ನಿಯ ಆಪ್ತಮಿತ್ರನಾಗಿ ಇಡೀ ಜೀವಸಂಕುಲವನ್ನು ಸುಡುತ್ತಿದ್ದಾನೆ. ಹಾಗಾಗಿ ಈ ಭೂಮಿಯೇ ಚಿತೆಯಾಗಿ ಪರಿಣಮಿಸಿದೆ. ಹೀಗಾಗಿ ಸೂರ್ಯ ಮಿತ್ರನಾಗುವುದರ ಜೊತೆಗೆ ಶತ್ರುವೂ ಕೂಡ ಆಗಿದ್ದಾನೆ. ಶತ್ರುವಾಗಿ ಮಾಡಿಕೊಂಡಿರುವವರು ನಾವೇನೆ. ನಮ್ಮ ಪರಿಸರ ಮಾಲಿನ್ಯದಿಂದಾಗಿ ಓಝೋನ್ ಪದರ ನಾಶದಿಂದಾಗಿ ಉರಿಬಿಸಿಲಿಗೆ ಕಾರಣರಾಗಿದ್ದೇವೆ.

**ಸ್ಥಾಯಿ**

**ಬೇಕಾದದ್ದು**

**ಸ್ಥಾವರ ಗುಣವಲ್ಲ;**

**ಸ್ಥಾಯಿ ಗುಣ**

**ತಾಯಿ ಗುಣ!** (ಆಲಿಕಲ್ಲು ಹನಿಗವನಗಳು, ಪು. ೪೧)

ಯಾವಾಗಲೂ ಅಚಲವಾದ ಗುಣವಿರಬೇಕು. ಆದರೆ ಚರವಲ್ಲದ ಗುಣವಿರಬಾರದು. ಅದರಲ್ಲೂ ತಾಯಿ ಗುಣ ಅದ್ಭುತವಾದದ್ದು. ಮಾನವನ ಬಾಹ್ಯ ಸೌಂದರ್ಯ ಇತರರನ್ನು ಆಕರ್ಷಿಸಿದರು. ಆಂತರೀಕ ಗುಣಕ್ಕೆ ಹೆಚ್ಚಿನ ಮೌಲ್ಯವಿದೆ.

ಸಂಶಯ ರಹಿತ ಮಾನವನ ಬದುಕು ಉತ್ತಮ. ಸಂಶಯಭರಿತ ಮಾನವನ ಬದುಕು ಅಧಮ. ಆದ್ದರಿಂದಾಗಿ ಮದ-ಮತ್ಸರಗಳು ಇರಬಾರದು.

**ಸಂಶಯ**

**ಕನ್ನಡ ಕುಲಕ್ಕೆ**
**'ಉತ್ಸರ್ಪಿಣೀ' ಕಾಲ**
**ಎಂಬುದುಂಟೆ**
**ಮತ್ಸರಾದಿ ನಾನಾ**
**ಸರ್ಪಗ್ರಸ್ತವಾಗಿರುವಾಗ?** (ಕುಡಿ-ಕಿಡಿ ಹನಿಗವನಗಳು, ಪು. ೪)

ಮನುಷ್ಯನಲ್ಲಿ ಮದ-ಮತ್ಸರಗಳು ಹುದುಗಿದರೆ ಆತನಿಗೆ ಮತ್ತು ಆತಲಿನ ಸುತ್ತಮುತ್ತಲಿನ ಪರಿಸರವೂ ಹದಗೆಡುತ್ತದೆ.

**ವೈರಿ**

**ಇಂಗ್ಲಿಷ್ ಭಾಷೆ**
**ನಮ್ಮ ವೈರಿಯಲ್ಲ;**
**ಅದರ ಬಗೆಗಿನ**
**ವ್ಯಾಮೋಹ ವೈರಿ** (ಕುಡಿ-ಕಿಡಿ ಹನಿಗವನಗಳು, ಪು. ೧೯)

ಭಾಷಾ ಕಲಿಕೆ ಎಷ್ಟಿರಬೇಕು ಅಷ್ಟಿರಬೇಕು. ಅತಿಯಾದರೆ ಅಮೃತವೂ ವಿಷವಾಗುವಂತೆ ಇರುತ್ತದೆ. ಮೊದಲು ಮಾತೃಭಾಷೆಗೆ ಪ್ರಾಧಾನ್ಯತೆ ಕೊಟ್ಟು ತದನಂತರ ಇತರ ಭಾಷೆಗೆ ಅವಕಾಶ ಕೊಡಬೇಕಾಗುತ್ತದೆ. ಆದ್ದರಿಂದಾಗಿ ಅತಿಯಾದ ವ್ಯಾಮೋಹ ನಮ್ಮ ವೈರಿಯಾಗಿದೆ.

**ಅರಿವು**

**ದಿನ ಕಳೆದಂತೆ**
**ವಯಸ್ಸು ಹೆಚ್ಚಿದಂತೆ**
**ನಮ್ಮ ಅಜ್ಞಾನದ**
**ಪರಿಧಿಯೂ**
**ವಿಸ್ತರಿಸುತ್ತದೆ!** (ಕುಡಿ-ಕಿಡಿ ಹನಿಗವನಗಳು, ಪು. ೩೧)

ಜ್ಞಾನವೆಂಬುದು ಅದ್ಭುತವಾದಂತಹ ಶಕ್ತಿಯಾಗಿದೆ. ಜ್ಞಾನಾರ್ಜನೆ ನಮ್ಮ ವ್ಯಕ್ತಿತ್ವವನ್ನು ವೃದ್ಧಿಸುತ್ತದೆ. ಆದ್ದರಿಂದಾಗಿ ದಿನ ಕಳೆಯುತ್ತಾ ಹೋದಂತೆ ವಯಸ್ಸು ಹೆಚ್ಚಾದಮತೆ ಅಜ್ಞಾನವು ವಿಸ್ತರಿಸುತ್ತಾ ಹೋಗುತ್ತದೆ.

**ಸಹನೆ**

**ಹಾಲು**

**ಕುಡಿಯುವವರು**

**ಸಗಣಿಯನ್ನು**

**ಸಹಿಸಿಕೊಳ್ಳಬೇಕು!**

(ಅಹನ್ಯ ಹನಿ, ಪು. ೩೫)

ಹಾಲನ್ನು ಅಮೃತವೆಂದು ಸ್ವೀಕರಿಸುತ್ತೇವೆ. ಹಾಗೆಯೇ ಸಗಣಿಯನ್ನು ಬೆರಣಿ ಮಾಡಬಹುದು. ಆದ್ದರಿಂದಾಗಿ ಕಷ್ಟಸುಖಗಳನ್ನು ಸಮವಾಗಿ ಸ್ವೀಕರಿಸಬೇಕಾಗಿದೆ.

ಹೀಗೆ ಸಿಪಿಕೆಯವರ ಚುಟುಕುಗಳನ್ನು ಸಾಮಾಜಿಕ ನೆಲೆಯಲ್ಲಿ ವಿಶ್ಲೇಷಿಸಿದಾಗ ಸಮಾಜದ ಒಂದೊಂದು ಅಂಶವನ್ನು ಗಣನೆಗೆ ತೆಗೆದುಕೊಂಡು ತಮ್ಮದೇ ಆದಂತಹ ರೀತಿಯಲ್ಲಿ ಚುಟುಕನ್ನು ರಚನೆ ಮಾಡಿದ್ದಾರೆ. ಒಟ್ಟಾರೆ ಸಾಮಾಜಿಕ ಕ್ಷೇತ್ರದಲ್ಲಿ ಓರೆ-ಕೋರೆಗಳನ್ನು ತಿದ್ದುತ್ತ, ಕುಟುಕುವುದರ ಮೂಲಕ ಚುರುಕನ್ನು, ಎಚ್ಚರಿಕೆಯನ್ನು ನೀಡುತ್ತಾ ಸಮಾಜವನ್ನು ಸುಧಾರಿಸುವ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಸಾಮಾಜಿಕ ಕ್ಷೇತ್ರದಲ್ಲಿ ಮನುಷ್ಯನ ಬದುಕಿನಲ್ಲಿ ಬರುವ ಆಗು-ಹೋಗುಗಳು, ಪ್ರಕೃತಿ ಪ್ರಧಾನಕ ಅಂಶಗಳು ಇವೇ ಮೊದಲಾದವುಗಳ ಬಗ್ಗೆ ಒಳಗಣ್ಣನ್ನು ತೆರೆಸುವುದರ ಮೂಲಕ ಚುಟುಕುವಿನ ನೆಲೆಯಲ್ಲಿ ಸಾಧನೆಗೈದಿದ ಮಹಾನ್ ಚುಟುಕು ಕವಿ ಡಾ. ಸಿಪಿಕೆ ಯವರಾಗಿದ್ದಾರೆ.

**೧.೨. ಧಾರ್ಮಿಕ ನೆಲೆಯ ಚುಟುಕುಗಳು**

ದೇವನೊಬ್ಬನೆ ನಾಮ ಹಲವು ಎಂಬುದಾಗಿಯೇ ಎಲ್ಲಾ ಧರ್ಮಗಳ ಸಾರ ಒಂದೇ ಆಗಿದೆ. ಹೀಗೆ ಎಲ್ಲಾ ಧರ್ಮಗಳು ಅಹಿಂಸೆ, ಶಾಂತಿಯನ್ನೇ ಘೋಷಿಸುತ್ತವೆ. ಆದರೆ ಸರ್ವಧರ್ಮ ಸಮನ್ವಯವಾಗಿರುವ ನಮ್ಮ ದೇಶದಲ್ಲಿ ಧರ್ಮದ ಹೆಸರಿನಲ್ಲಿ ಬೇಕಾದಷ್ಟು ಅನಾಚಾರಗಳು ನಡೆಯುತ್ತಿದೆ. ಆದರೆ ಇದನ್ನು ಹೋಗಲಾಡಿಸುವ ಶಕ್ತಿ ಯಾರಲ್ಲಿಯೂ ಇಲ್ಲ ಎಂದು ಹೇಳಿದರೆ ತಪ್ಪಾಗಲಾರದು.

ಧಾಮಿಕ ವಿಚಾರದ ಹಿನ್ನೆಲೆಯಲ್ಲಿ ಪ್ರತಿಯೊಂದು ನೆಲೆಯಲ್ಲಿಯೂ ಅದರದೇ ಆದಂತಹ ಸೂತಕಗಳಿವೆ. ಧರ್ಮಗಳು ಬಾಹ್ಯವಾಗಿ ಜನರನ್ನು ಆಕರ್ಷಿಸಿದರು ತನ್ನದೇ ಆದ ಒಳಕಟ್ಟುಪಾಡುಗಳ ಮೂಲಕ ತನ್ನ ಸ್ಥಾನಮಾನದಲ್ಲಿ ಕೊರತೆಯನ್ನು ಧರ್ಮಗಳು ತಂದುಕೊಳ್ಳುತ್ತಿದೆ. ಹಾಗಾಗಿ ಡಾ.ಸಿ.ಪಿ.ಕೆಯವರು ಧಾರ್ಮಿಕ ನೆಲೆಯ ಹಿನ್ನೆಲೆಯಲ್ಲಿ ಆ

ಕ್ಷೇತ್ರದಲ್ಲಿ ಕಂಡುಬರುವಂತಹ ನ್ಯೂನ್ಯತೆಯನ್ನು ಎತ್ತಿ ಹಿಡಿದು, ತನ್ನದೇ ಆದಂತಹ ಚುರುಕನ್ನು ಮುಟ್ಟಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಧಾರ್ಮಿಕ ಚುಟುಕುಗಳನ್ನು ವಿಶ್ಲೇಷಿಸಲಾಗುತ್ತದೆ.

**ಭಕ್ತಿ**

**ದೇವರಿಲ್ಲದಿದ್ದರೂ**
**ಭಕ್ತಿಯುಂಟು, ದಿಟ;**
**ಆದರೆ ಅದೂ ಈಗ**
**ಬಹುತೇಕ**
**ಕಪಟ ಭಕ್ತಿ!** (ಕುಡಿ–ಕಿಡಿ ಹನಿಗವನಗಳು, ಪು. ೪)

ಭಕ್ತಿ ಎಂಬ ಎರಡಕ್ಷರದಲ್ಲಿ ಉಳಿದಿರುವುದೇ ಕೇವಲ ತೋರಿಕೆಯ ಭಕ್ತಿಯಾಗಿದೆ. ಇಲ್ಲವೇ ಆಡಂಬರದ ಭಕ್ತಿಯಾಗಿದೆ. ಉತ್ತಮ ನಿದರ್ಶನಕ್ಕೆ ವರಮಹಾಲಕ್ಷ್ಮಿ ಹಬ್ಬವನ್ನು ನೀಡಬಹುದಾಗಿದೆ. ಏಕೆಂದರೆ ಇಂದು ಪೈಪೋಟಿಯ ಮೂಲಕ ಲಕ್ಷ್ಮೀ ಕರೆಯುತ್ತಿದ್ದಾರೆ. ಸಾಲ ಮಾಡಿಯಾದರೂ ತುಪ್ಪವನ್ನು ತಿನ್ನಬೇಕೆಂಬ ರೀತಿಯಲ್ಲಿ. ಹೀಗೆ ಕಷ್ಟದಲ್ಲಿ ಆಚರಿಸುವುದು ಅಸಮಂಜಸವಾದುದಾಗಿದೆ. ಏಕಾಗ್ರತೆಯಿಂದ ಮನಸ್ಸು ಕೂಡಿರುವುದೇ ಭಕ್ತಿ ಎಂದು ಹೇಳಿದರೆ ತಪ್ಪಾಗಲಾರದು.

**ವಿರೋಧ**

**ಲಕ್ಷ್ಮಿ, ಸರಸ್ವತಿಯರಿಗೆ**
**ಸಹಜ ವಿರೋಧ;**
**ಅವರು ಒಡಹುಟ್ಟಿದವರಲ್ಲ!**
**(ಆದರೆ ಕೆಲವೊಮ್ಮೆ**
**ಒಡಗೂಡಬಹುದು)** (ಕುಡಿ–ಕಿಡಿ ಹನಿಗವನಗಳು, ಪು. ೬)

ದೇವತೆಗಳೆಂದು ಪೂಜಿಸುತ್ತೇವೆ. ಆದರೆ ದೇವತೆಗಳಲ್ಲೇ ವಿರೋಧ ಕಂಡುಬಂದ ಮೇಲೆ ಮರ್ಕಟನ ಮನಸ್ಸಾಗಿರುವ ಮನುಷ್ಯನಲ್ಲಿ ವಿರೋಧವು ಸಹಜವಾದುದಾಗಿದೆ.

**ಜನ್ಮ**

**ಆಶ್ಚರ್ಯ**
**ಒಂದೇ ಜನ್ಮದೊಳಗೆ**
**ಅನೇಕ**
**ಜನ್ಮಗಳಿರಬಹುದು**
**ಇರುತ್ತವೆ!** (ಕುಡಿ–ಕಿಡಿ ಹನಿಗವನಗಳು, ಪು. ೭)

ಅಂದಿನಿಂದ ಇಂದಿನವರೆಗೂ ಜನ್ಮಾಂತರದ ಬಗ್ಗೆ ನಮ್ಮ ಜನರಲ್ಲಿ ತನ್ನದೇ ಆದಂತಹ ನಂಬಿಕೆ ಇದೆ. ಮನುಷ್ಯನ ಜನ್ಮವೇ ಎಲ್ಲಾ ಜನ್ಮಗಳ ಕೊನೆಯ ಹಂತ ಎಂದು ಹೇಳಬಹುದಾಗಿದೆ. ಹೀಗೆ ಒಂದೇ ಜನ್ಮದೊಳಗೆ ಅನೇಕ ಜನ್ಮಗಳಿರುವ ಹಾಗೆ, ಮನುಷ್ಯನೆಂಬ ದೇಹದಲ್ಲಿ ಸರ್ವಗುಣಗಳು ಕೂಡ ಇದೆ ಎಂದು ಹೇಳಿದರೆ ತಪ್ಪಾಗಲಾರದು.

ಮಾತನ್ನು ದೇವರಿಗೆ ಅದರಲ್ಲೂ ಶಿವನಸ್ವರೂಪವಾದ ಲಿಂಗಕ್ಕೆ ಹೋಲಿಸಲಾಗಿದೆ. ಆದ್ದರಿಂದ ದೇವರು ಹೇಗೆ ಮೂರ್ತರೂಪದ ಮೂಲಕ ಶಾಂತತೆಯನ್ನು ಕಾಪಾಡಿ-ಕೊಳ್ಳುತ್ತಾನೋ ಹಾಗೆಯೇ ಮಾತಿರಬೇಕೆಂಬುದನ್ನು ತಿಳಿಸಿದ್ದಾರೆ.

**ಮಾತು**

**ಕವಿತೆ ಮೇಲು**
**ಮಾತು ಕೀಳು**
**ಎನ್ನಬಹುದೇ?**
**ಮಾತೆಂಬುದು**
**ಜ್ಯೋತಿರ್ಲಿಂಗ**
**ಎಂಬ ಮಾತೂ ಉಂಟಲ್ಲವೇ?** (ಕುಡಿ–ಕಿಡಿ ಹನಿಗವನಗಳು, ಪು. ೯)

**ಬು(ಯು)ದ್ಧ**

**ಯುದ್ಧಗಳಲ್ಲಿ**
**ಕಳೆದುಹೋಗಿದ್ದಾನೆ ಬುದ್ಧ;**
**ಬುದ್ಧನಲ್ಲಿ ಯುದ್ಧಗಳು**
**ಕಳೆದುಹೋಗುವ ಕಾಲ**
**ಬರಲಿ ಬೇಗ!** (ಅಹನ್ಯ ಹನಿ, ಪು. ೩)

ಬೌದ್ಧಧರ್ಮದ ಸ್ಥಾಪಕನಾದ ಗೌತಮಬುದ್ಧ ಅಹಿಂಸೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದನು. ಹಾಗೆಯೇ ಬುದ್ಧನು ಹಿಂಸೆ, ಆಕ್ರಮಣವನ್ನು ಧಿಕ್ಕರಿಸಿದನೋ ಹಾಗೆಯೇ ಯುದ್ಧಗಳು ನಿಲ್ಲುವಂತಹ ಕಾಲ ಬರಲೆಂದು ಆಶಾಭಾವನೆಯಾಗಿ ಇಟ್ಟುಕೊಂಡಿರುವಂತಹ ಚುಟುಕಿದು. ಇದಕ್ಕೆ ಪೂರಕವಾಗಿ ಈ ಕೆಳಗಿನ ಚುಟುಕು ಇದೆ.

**ಮದ್ದು**

**ಅರಳಿ ಮರದಡಿಯಲ್ಲಿ**
**ಅರಳಿತ್ತು ಸಿದ್ದಾರ್ಥ ಪ್ರಜ್ಞೆ**
**ಆ ಅಶ್ವಸ್ಥದ ಕೆಳಗೆ**

**ಹೊಳೆದದ್ದು ಅತ್ಯುತ್ತಮ ಮದ್ದು**
**ಇಂದಿನ ಅಸ್ವಸ್ಥ ಜಗತ್ತಿಗೆ** (ಅಹನ್ಯ ಹನಿ, ಪು. ೪೮)

ಇಂದು ಜಗತ್ತು ಅಸ್ವಸ್ಥಗೊಳ್ಳುತ್ತಿದೆ. ಬೌದ್ಧಧರ್ಮದ ಪ್ರವರ್ತಕನಾದ ಸಿದ್ಧಾರ್ಥನ ಮನಸ್ಸಿನಲ್ಲಿ ಹೊಳೆದಂತಹ ಮದ್ದು ಎಂದರೆ ನೀತಿಯಾಗಿದೆ. ಇಂದಿನ ಅಸ್ವಸ್ಥ ಜಗತ್ತಿಗೆ ಅದು ಮದ್ದಾಗಿದೆ.

**ನರಕ**

**ಕೆಲವು ಮನೆಗಳಲ್ಲಿ**
**ಸದಾ ದೀಪಾವಳಿಯಾದರೆ**
**ಮತ್ತೆ ಕೆಲವು ಮನೆಗಳಲ್ಲಿ**
**ನಿತ್ಯ 'ನರಕ' ಚತುರ್ದಶಿ!** (ಅಹನ್ಯ ಹನಿ, ಪು. ೬೨)

'ನರಕ ಚತುರ್ದಶಿ' ಎಂಬುದು ದೇವರ ಪೂಜೆಯಾಗಿದೆ. ಆದರೆ ಇಂದು ಮನೆಯಲ್ಲಿ ನಡೆಯುವ ಅಲ್ಲೋಲ ಕಲ್ಲೋಲಗಳಿಗೆ ಹೋಲಿಸಲಾಗುತ್ತಿದೆ.

ಹೀಗೆ ಧರ್ಮದ ಹೆಸರಿನಲ್ಲಿ ಸಾಮಾಜಿಕ ಸಂಸಾರದ ತಾಪತ್ರಯವನ್ನು ವಿಡಂಬಿಸಿರುವುದು ಸಿಪಿಕೆಯವರ ಚುಟುಕುವಿನ ವೈಶಿಷ್ಟ್ಯವಾಗಿದೆ

**ಪಶು**

**ಶಿವನಿಗೆ ಪಶುಪತಿ**
**ಎಂದೂ ಹೆಸರು;**
**ಸ್ವಾರಸ್ವವೆಂದರೆ,**
**ಅನೇಕರಿಗೆ ಸಿಗುವವರು**
**ಪತಿಪಶುಗಳು!** (ಅಹನ್ಯ ಹನಿ, ಪು. ೬೫)

ಶಿವನಿಗೆ ಪಶುಪತಿ ಎಂಬ ನಾಮಧೇಯವಿದ್ದರೆ ಇಂದು ಪಶುವನ್ನು ಪತಿಗೆ ಹೋಲಿಸಲಾಗುತ್ತಿದೆ. ಧರ್ಮದ ಕೆಲವು ಆಚರಣೆಗಳು ಉತ್ತಮವೆನಿಸಿದರೆ, ಕೆಲವು ಉತ್ತಮವಾದುದಲ್ಲದಾಗಿದೆ. ಪಶು ಮೂರು ಕೋಟಿ ದೇವರುಗಳು ನೆಲೆನಿಂತಿರುವ ದೇವಾಲಯವಾಗಿದೆ. ಆದರೆ ಪತಿಗೆ ಹೋಲಿಸುವುದು ಅಸಮಂಜಸವಾದುದು.

**ಜಾತಿ**

**ನಮ್ಮ ವಿಮರ್ಶೆಯಲ್ಲಿ ಎಷ್ಟೋ ಪಾಲು**
**ಜಾತಿ ವಿಮರ್ಶೆ!**
**ಆದರೆ ಒಳ್ಳೆಯ ಹೆಸರು ಅದಕ್ಕೆ**
**ಜಾತಿ ನಾಯಿ ಎಂದಂತೆ!** (ಸಿಪಿಕೆ ಸಮಗ್ರ ಕವಿತೆ, ಪು. ೩೩೧)

ಇಂದು ೨೧ನೇ ಶತಮಾನವಾದರೂ ಜಾತಿಯಿಂದ ನಮ್ಮ ದೇಶ ಇನ್ನೂ ಮುಕ್ತವಾಗಿಲ್ಲ. ಜತಿ ಎಂಬುದೇ ವ್ಯಕ್ತಿಯನ್ನು ನಾಶಮಾಡುತ್ತಿದೆ ಎಂದು ಹೇಳಿದರೆ ತಪ್ಪಾಗಲಾರದು. ಆದ್ದರಿಂದ ಜಾತಿಯನ್ನು ನಾಯಿ ಎಂದು ಕರೆದಿದ್ದಾರೆ.

**ಮೌನ–ಧ್ಯಾನ**

**ಕೆಲವು ಸಂದರ್ಭಗಳಿರುತ್ತವೆ:**
**ಮಾತು**
**ಮೂಕವಾಗುತ್ತದೆ;**
**ಮೌನ**
**ಧ್ಯಾಸ್ಥವಾಗುತ್ತದೆ.** (ಕುಡಿ–ಕಿಡಿ, ಪು. ೧೨)

ಮಾತು ಎಷ್ಟು ಪ್ರಾಮುಖ್ಯತೆಯನ್ನು ಗಳಿಸಿಕೊಂಡಿರುತ್ತದೆಯೋ ಹಾಗೆಯೇ ಮೌನವು ಕೂಡ ಪ್ರಾಮುಖ್ಯತೆಯನ್ನು ಗಳಿಸಿಕೊಂಡಿದೆ. ಮೌನವನ್ನು ಧ್ಯಾನಕ್ಕೆ ಹೋಲಿಸಿರುವುದು ಉತ್ತಮವಾದುದಾಗಿದೆ. ಆದ್ದರಿಂದ ಧ್ಯಾನ ಎಂಬುದು ನಮ್ಮ ಸಂಪೂರ್ಣ ಬದಲಾವಣೆಗೆ ಅವಕಾಶ ಮಾಡಿಕೊಡುತ್ತದೆ.

**ಅಕ್ಷರ**

**ಸರಸ್ವತಿಯ ವಿಗ್ರಹ**
**ಅಥವಾ ಚಿತ್ರ**
**ಸರಸ್ವತಿಯಲ್ಲ;**
**ಪುಸ್ತಕ**
**"ಅಕ್ಷರಶಃ" ಸರಸ್ವತಿ!** (ಕುಡಿ–ಕಿಡಿ, ಪು. ೧೪)

ಹೌದು ಅಕ್ಷರವೇ ನಿಜವಾದ ಸರಸ್ವತಿಯಾಗಿದೆ.

**ದೇವರೇ ಗತಿ**

**ನಿಜವಾದ**
**ತಂದೆ ಯಾರು ಎಂಬುದಿರಲಿ,**
**ತಾಯಿ ಯಾರು ಎಂಬುದೂ**
**ಈಗ ಸಂದಿಗ್ಧ!**
**ಆದ್ದರಿಂದಲೇ ದೇವರನ್ನು**
**"ತಂದೆ ನೀನು, ತಾಯಿ ನೀನು!"**
**ಎಂದು ಹಿಂದೆಯೇ ಕೀರ್ತಿಸಿದ್ದು!** (ಕುಡಿ–ಕಿಡಿ, ಪು. ೨೮)

ಈಗ ಗಂಡು-ಹೆಣ್ಣಿನ ದಾಂಪತ್ಯಕ್ಕೆ ಯಾವುದೇ ಬೆಲೆ ದೊರೆಯುತ್ತಿಲ್ಲ. ಏಕೆಂದರೆ ಸಹಜವಾಗಿಯೇ ಹೆಣ್ಣು ಗಂಡನನ್ನು ಗಂಡ ಹೆಣ್ಣನ್ನು ತೊರೆಯುತ್ತಿದ್ದಾರೆ. ಆದ್ದರಿಂದಲೇ ದೇವರನ್ನು ತಂದೆ, ತಾಯಿ ಎಂದು ಹೇಳಿದುದಾಗಿದೆ.

**ಕಾಂಡ**

**ಧರ್ಮದ ಹೆಸರಿನಲ್ಲಿ**
**ಚರಿತ್ರೆ ಯುದ್ಧಕ್ಕೂ**
**ಎಷ್ಟೊಂದು**
**ಕರ್ಮಕಾಂಡ, ಕಾಮ**
**ಕಾಂಡಗಳ ತಾಂಡವ!** (ಕುಡಿ-ಕಿಡಿ, ಪು. ೨೮)

ಅಂದು – ಇಂದು ಎರಡೂ ಕಾಲದಲ್ಲಿಯೂ ಧರ್ಮದ ಹೆಸರಿನಲ್ಲಿ ನಾನಾ ಅಪಚಾರ, ಅನ್ಯಾಯಗಳನ್ನು ಎಸಗಲಾಗುತ್ತಿದೆ. ಆದ್ದರಿಂದಾಗಿ ಈ ಕಾಂಡ ಅಂದಿನಿಂದ ಇಂದಿನವರೆಗೂ ಹಬ್ಬಿಕೊಂಡು ಹೋಗುತ್ತಿದೆ.

**ಅರ್ಜುನ**

**ಜೀವನದ**
**ಕುರುಕ್ಷೇತ್ರದಲ್ಲಿ**
**ಅರ್ಜುನನಂತೆ**
**ಸವ್ಯಸಾಚಿಯಾಗಬೇಕು;**
**ಕರ್ಮಕ್ಷೇತ್ರದಲ್ಲಿ**
**ಕಾರ್ತವಿರ್ಯಾರ್ಜುನನಂತೆ**
**ಸಹಸ್ರಬಾಹುವಾಗಬೇಕು!** (ಕುಡಿ-ಕಿಡಿ, ಪು. ೩೭)

ಅರ್ಜುನ ಮತ್ತು ಕಾರ್ತವೀರ್ಯಾರ್ಜುನರಂತೆ ಪುರುಷರು ತಮ್ಮ ದೈಹಿಕ ಆರೋಗ್ಯದ ಜೊತೆಗೆ ಬುದ್ಧಿವಂತಿಕೆ ಕೂಡ ಇರಬೇಕು ಎಂಬುದನ್ನು ತಿಳಿಸಲಾಗಿದೆ.

**ಗುರು**

**ತನ್ನ ಕೃತಿ**
**'ಕಾವ್ಯಕ್ಕೆ ಗುರು'**
**ಎಂದು ಹೇಳಿಕೊಂಡ**
**ಕವಿ ಕುಮಾರವ್ಯಾಸ**
**ಹೌದೋ, ಅಲ್ಲವೋ,**

**ಆದರೆ ವಿಮರ್ಶೆ**

**'ಕಾವ್ಯಕ್ಕೆ ಗುರು'ವಾಗಬೇಕು!** (ಕುಡಿ–ಕಿಡಿ, ಪು. ೩೮)

ಧಾರ್ಮಿಕ ಕ್ಷೇತ್ರದಲ್ಲಿ ದೇವರಿಗೆ ಎಷ್ಟು ಬೆಲೆ ಇದೆಯೋ ಹಾಗೆಯೇ ಗುರುವಿಗೂ ಸಹ ಬೆಲೆಯಿದೆ. ವಿಮರ್ಶೆಯು ಹೇಳುವುದು ಕಾವ್ಯಕ್ಕೆ ಗುರು ವ್ಯಾಸನಾಗಬೇಕೆ ಹೊರತು, ಕೃತಿಯಲ್ಲ ಎಂಬುದನ್ನು ಹೇಳುತ್ತಿದೆ. ಮೊದಲು ಗುರು ಆದರ್ಶವಾಗಿರಬೇಕು. ಆಗ ಆತನು ಮಾಡುವ ಇತರೆ ಎಲ್ಲಾ ಅಂಶಗಳು ಆದರ್ಶವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಆದ್ದರಿಂದಲೇ ಗುರು ದೇವೋಭವ ಎಂದು ಕರೆಯಲಾಗುವುದು.

**ಹಣ್ಣುಕಾಯಿ**

**"ಸುಲಿದ ಬಾಳೆಯ ಹಣ್ಣು"**
**ಅಭೇದ್ಯ ಕರಟದ**
**ತೆಂಗಿನ ಕಾಯಿ**
**ಎರಡನ್ನೂ ದೇವರಿಗೆ**
**ಅರ್ಪಿಸುವುದರಲ್ಲಿ**
**ಅರ್ಥವಿರಬೇಕಲ್ಲವೇ?** (ಕುಡಿ–ಕಿಡಿ, ಪು. ೪೨)

ಹೌದು, ಖಂಡಿತಾ ಅರ್ಥವಿದೆ. ಇವು ಪರಿಶುದ್ಧತೆಯ ಸಂಕೇತವಾಗಿದೆ. ಕಲ್ಮಷವೇ ತುಂಬಿಕೊಂಡಿರುವ ನಮ್ಮ ಮನಸ್ಸಿನಲ್ಲಿ ಪರಿಶುದ್ಧಗೊಳಿಸು ಎಂಬ ಅರ್ಥವನ್ನು ನೀಡುತ್ತದೆ.

**ದೈವ**

**ಜಗತ್ತಿನಲ್ಲಿ ಎಷ್ಟು**
**ವ್ಯಕ್ತಿಗಳೋ ಅಷ್ಟು**
**ದೈವಗಳು**
**(ಅವರಿಗೆ ತಿಳಿದಿರಲಿ, ಇಲ್ಲದಿರಲಿ)** (ಕುಡಿ–ಕಿಡಿ, ಪು. ೫೨)

ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳಿದ್ದಾರೋ ಅಷ್ಟೇ ದೇವರು ಕೂಡ ಈ ಭೂಮಿಯ ಮೇಲೆ ಇದ್ದಾರೆ. ಕೆಟ್ಟವರ ನಡುವೆ ಒಳ್ಳೆಯವರೂ ಸಹ ಇದ್ದಾರೆಂಬುದನ್ನು ಇದು ತಿಳಿಸುತ್ತದೆ.

**ಅರ್ಥ**

**ಶಿವ ಅರ್ಧನಾರೀಶ್ವರ**
**ಎಂಬುದು ಪ್ರಸಿದ್ಧ;**
**ಹಾಗೆ ನೋಡಿದರೆ,**
**ಶಿವೆ ಅರ್ಧನಾರೀಶ್ವರಿಯಲ್ಲವೇ?**

ಇಂದಿನ ದೃಷ್ಟಿಗಂತು
ಹೆಣ್ಣುಗಳೆಲ್ಲ ಅರ್ಧ
ನಾರೀಶ್ವರಿಯರೆ!

(ಕುಡಿ–ಕಿಡಿ, ಪು. ೫೫)

ದೇವರ ಹೆಸರಿನಲ್ಲಿ ಅರ್ಧನಾರೀಶ್ವರಿಯಾಗಿ ಹೆಣ್ಣು ಮೆರೆಯುತ್ತಿದ್ದಾಳೆಂಬುದನ್ನು ವಿಡಂಬಿಸಿರುವುದು ಸೂಕ್ತವಾಗಿದೆ.

ವಿರಳ

ಅಮೃತಮತಿಯರು
ಬಹಳ
ಸೀತೆಯರು ವಿರಳ;
ರಾವಣ, ಕೀಚಕರು ಬಹಳ,
ರಾಮಲಕ್ಷ್ಮಣರು
ವಿರಳ!



(ಕುಡಿ–ಕಿಡಿ, ಪು. ೭೨)

ಸಮಾಜದಲ್ಲಿ ಇಂದು ಒಳ್ಳೆಯ ಗುಣಗಳನ್ನು ಹೊಂದಿರುವಂತಹ ಸ್ತ್ರೀಯರು ಮತ್ತು ಪುರುಷರು ಕಂಡುಬರುವುದು ಬಹಳ ವಿರಳ. ರಾಮ,ಲಕ್ಷ್ಮಣ, ಸೀತೆ ಇಂತಹ ಒಳ್ಳೆಯ ಗುಣಗಳನ್ನು ಹೊಂದಿರುವವರು ಕಡಿಮೆ. ದುಷ್ಟ ಗುಣಗಳನ್ನು ಹೊಂದಿರುವಂತಹ ವ್ಯಕ್ತಿಗಳ ಸಂಖ್ಯೆಯೇ ಅಧಿಕವಾಗಿದೆಂಬುದನ್ನು ಈ ಮೇಲಿನ ಚುಟುಕು ತಿಳಿಸುತ್ತದೆ.

ಹಕ್ಕು

ಬದುಕಲು ಹಕ್ಕಿಲ್ಲ
ಎನಿಸದಾಗಲೂ
ಹಕ್ಕಿಯಾಗಿ ಹಾರಿ
ಹೋಗಲಾಗದು
ಎನ್ನುವುದು ದುರ್ದೈವ!

(ಕುಡಿ–ಕಿಡಿ, ಪು. ೮೨)

ಹಕ್ಕಿ ಹೇಗೆ ಸ್ವಚ್ಛಂದವಾಗಿ ಹಾರುತ್ತಾ ಹೊಗುತ್ತದೆ. ಹಾಗೆಯೇ ಮನುಷ್ಯನಿಗೂ ಸಹ ಬದುಕಲು ಸ್ವಾತಂತ್ರ್ಯವಿಲ್ಲದಿದ್ದಾಗ ಬದುಕು ನರಕಯಾತನೆಯಾಗುತ್ತದೆ. ಇದು ಮಾನವನ ದುರ್ದೈವವಾಗಿದೆ. ಬದುಕು ಮನುಷ್ಯನಿಗೆ ದೇವರು ಕೊಟ್ಟಂತಹ ಅತ್ಯುತ್ತಮ ಕೊಡುಗೆ–ಯಾಗಿದ್ದು ಅದನ್ನು ಸದುಪಯೋಗ ಮಾಡಿಕೊಳ್ಳಬೇಕು.

**ಅಗತ್ಯ**

**ಏನು ಇಂದಿನ ಅಗತ್ಯ?**
**ದೇವಾಲಯವಲ್ಲ;**
**ವಿದ್ಯಾಲಯ,**
**ವೈದ್ಯಾಲಯ!** (ಕುಡಿ-ಕಿಡಿ, ಪು. ೧೦೨)

ಇಂದು ದೇವಾಲಯಗಳು ವಿಶ್ರಾಂತಿಯ, ಮನಸ್ಸಿಗೆ ನೆಮ್ಮದಿಕೊಡುವ ದೇವರ ಮಂದಿರವಲ್ಲ, ಈ ದಿನಗಳಲ್ಲಿ ದೇವಾಲಯಗಳು ಪ್ರೇಮಿಗಳ ಸ್ಥಳವಾಗಿದೆ. ಇಲ್ಲವೇ ಕಾಲ ಕಳೆಯಲು ಹೋಗುವಂತಹ ಸ್ಥಳವಾಗಿದೆ. ಈ ದಿನಗಳಲ್ಲಿ ವಿದ್ಯಾಲಯ, ವೈದ್ಯಾಲಯಗಳಿಗೆ ಇರುವ ಪ್ರಾಮುಖ್ಯತೆ ದೇವಾಲಯಗಳಿಗೆ ಇಲ್ಲ ಎಂದು ಹೇಳಿದರೆ ತಪ್ಪಾಗಲಾರದು. ದೇವಾಲಯದ ಸ್ಥಿತಿಗತಿಯನ್ನು ಇದು ತಿಳಿಸುತ್ತದೆ.

**ಮಾಯ**

**ಪ್ರೀತಿಸಿ**
**ದೇವಸ್ಥಾನಗಳಲ್ಲಿ**
**ಮದುವೆಯಾಗುವ ಅನೇಕ**
**ಹುಡುಗ, ಹುಡುಗಿಯರು**
**ಕಡೆಗೆಲ್ಲಿ ಮಾಯವಾಗುತ್ತಾರೊ**
**ಯಾರಿಗೂ ತಿಳಿಯದು**
**ದೇವರಿಗೂ!** (ಕುಡಿ-ಕಿಡಿ, ಪು. ೧೦೪)

ಕಷ್ಟ ಬಂದಾಗ ದೇವರು ಬೇಕು ಎಂದು ಜನರು ಹೇಳುತ್ತಾರೆ. ಹಾಗೆಯೇ ದೇವರ ಸಾಕ್ಷಿಯಾಗಿ ವಿವಾಹವಾಗುತ್ತಾರೆ. ಆದರೆ ಇಬ್ಬರೂ ಮಾಯವಾದಾಗ ಜನರಿಗೂ ತಿಳಿಯದು ಮತ್ತೆ ದೇವರಿಗೂ ತಿಳಿಯದಾಗಿದೆ.

**ದೇವಿ(ಹಿ)**

**ಹೆಣ್ಣು ತನ್ನಂತಹ**
**ದೇಹಿಯೇ ಆದರೂ**
**ಗಂಡು ಅವಳನ್ನು**
**'ದೇವಿ' ಎಂದು ಹೊಗಳುತ್ತ**
**'ದೇಹಿ' ಎಂದು ಕೈಯೊಡ್ಡಿ**
**ನಿಲ್ಲುವುದೆಂಥ ವಿಚಿತ್ರ!**

(ಕುಡಿ-ಕಿಡಿ, ಪು. ೧೧೦)

ಹೆಣ್ಣನ್ನು ಸರ್ವಗುಣಗಳ ಸಂಪನ್ನಳಾಗಿ ದೇವಿ ಎಂದು ಕರೆದರೆ ಮತ್ತೆ ಕೆಲವು ಸಂದರ್ಭಗಳಲ್ಲಿ ದೆವ್ವ ಎಂತಲೂ ಕರೆಯುವ ಸನ್ನಿವೇಶ ಒದಗಿಬರಬಹುದು. ಆದರೆ ಹೆಣ್ಣು ದೇಹಿಯಂತೆ ಇರುತ್ತಾಳಾದರೂ ಗಂಡು ಅವಳ ಮುಂದೆ ದೇಹಿ ಎನ್ನುವುದು ಎಂತಹ ವಿಪರ್ಯಾಸ ಎಂಬುದನ್ನು ಈ ಮೇಲಿನ ಚುಟುಕು ವ್ಯಕ್ತಪಡಿಸುತ್ತದೆ.

**ಮೂಲ**

**ಹಿಂದಿನ ಅನೇಕ**
**ರಾಕ್ಷಸರು**
**ಮೂಲತಃ ದೇವತೆಗಳು;**
**ಇಂದಿನ ಅನೇಕ ಮಾನವರು**
**ರಾಕ್ಷಸರು!** (ಕುಡಿ–ಕಿಡಿ, ಪು. ೧೧೮)

ಹಿಂದಿನ ಅನೇಕ ರಾಕ್ಷಸರು ಮೂಲತಃ ದೇವತೆಗಳಾದರೆ ಇಂದಿನ ಅನೇಕ ಜನರು ರಾಕ್ಷಸರಾಗಿದ್ದಾರೆ. ಮನುಷ್ಯನು ಎಂತಹ ರಾಕ್ಷಸನಾಗುತ್ತಿದ್ದಾನೆಂಬುದುನ್ನು ತಿಳಿಸುತ್ತದೆ.

**(ಹೃ)ದಯ**

**"ದಯವಿಲ್ಲದ ಧರ್ಮ**
**ಅದೇವುದಯ್ಯಾ?"**
**ಈಗಿನ ಪ್ರಶ್ನೆ;**
**"ಹೃದಯವಿಲ್ಲದ ಧರ್ಮ..."?**
**(ಕೆಲವೊಮ್ಮೆ ಹಲವರ ಹೃದಯ ಕಳುವಾಗಿರುತ್ತದೆ!)**

(ಕುಡಿ–ಕಿಡಿ, ಪು. ೧೩೪)

ಹಿಂದೆ ದಯೆ, ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇತ್ತು. ಆದರೆ ಇಂದು ಹೃದಯವಿಲ್ಲದ ಧರ್ಮ ಯಾವುದೆಂಬುದಾಗಿದೆ. ಇಂತಹ ದಯೆ, ಅನುಕಂಪ, ಕರುಣೆ ಇವುಗಳಿಗೆ ಯಾವುದೇ ಪ್ರಾಮುಖ್ಯತೆ ಇಲ್ಲ. ಆದ್ದರಿಂದಲೇ ಹೃದಯವಿಲ್ಲದ ಧರ್ಮ ಎಂದು ಹೇಳಿರುವುದಾಗಿದೆ.

**ಧ್ಯಾನ**

**ದೇವಾಲಯದಲ್ಲಾದರು ದೇವರ**
**ನೆನೆನೆನೆ ಓ ಮನವೇ;**
**ಉಳಿದ ದೇಶ, ಕಾಲಗಳಿವೆ ಹೇರಳ**
**ಅನ್ಯರ ನೆನೆವುದಕೆ!** (ಸಿಪಿಕೆ ಸಮಗ್ರ ಕವಿತೆ, ಪು. ೨೦೭)

ದೇವಾಲಯದಲ್ಲಾದರೂ ದೇವರ ನೆನೆಯದೆ ಇತರರ ಬಗ್ಗೆ ನೆನೆಯುವುದರಲ್ಲಿ ಅರ್ಥವಿಲ್ಲ. ಆದ್ದರಿಂದಾಗಿ ಧ್ಯಾನವೆಂದಾಗ ದೇವರ ಧ್ಯಾನ ಮಾಡುವುದು ಉತ್ತಮ-ವಾದುದಾಗಿದೆ.

**ಎರಡು ಮುಖ**

**ಕಾಮವೇ**
**ಧರ್ಮಬದ್ಧವಾಗಿದ್ದಾಗ, ನಿನ್ನಷ್ಟು**
**ಒಳ್ಳೆಯದು ಯಾವುದೂ ಇಲ್ಲ;**
**ಕಾಮವೇ**
**ಧರ್ಮಬಾಹಿರವಾದಾಗ, ನಿನ್ನಷ್ಟು**
**ಕೆಟ್ಟದ್ದು ಯಾವುದೂ ಇಲ್ಲ!** (ಸಿಪಿಕೆ ಸಮಗ್ರ ಕವಿತೆ, ಪು. ೨೦೯)

ಕಾಮವೆಂಬುದು ಯಾವ ಮನುಷ್ಯನಿಂದಲೂ ಹೊರತಾದುದಲ್ಲ. ಏಕೆಂದರೆ ಅಂತಹ ಶಕ್ತಿ ಅದಕ್ಕೆ ಇದೆ. ನೀತಿನಿಯಮದ ಮೂಲಕ ಮಾಡಿದ ಕಾಮಕ್ಕೆ ಅರ್ಥವಿರುತ್ತದೆ. ಆದರೆ ವಿವಾಹಕ್ಕಿಂತಲೂ ಮುಂಚೆ ಇದ್ದಂತಹ ಕಾಮಕ್ಕೆ ಅಪಾರ್ಥವಿರುತ್ತದೆ. ಆದ್ದರಿಂದಾಗಿಯೇ ಧರ್ಮಬಾಹಿರ, ಧರ್ಮಬದ್ಧತೆಯಿಂದ ಕಾಮವು ಕೂಡಿರುತ್ತದೆಂಬುದನ್ನು ಇದು ತಿಳಿಸುತ್ತದೆ.

**ಪೂಜಾಸ್ಥಾನ**

**"ಗುಣಾಃ ಪೂಜಾಸ್ಥಾನಂ,"**
**ನ ಚ ಲಿಂಗಂ ನ ಚ ವಯ;"**
**ಎಂದನೊಬ್ಬ ಕವಿ,**
**ಬಹುಮಂದಿಗೆ ಲಿಂಗವೇ**
**ಪೂಜಾಸ್ಥಾನ** (ಸಿಪಿಕೆ ಸಮಗ್ರ ಕವಿತೆ, ಪು. ೨೧೬)

ಪೂಜೆ-ಪುರಸ್ಕಾರಕ್ಕೆ ನಮ್ಮ ದೇಶದಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಆದ್ದರಿಂದ ಆತ್ಮಲಿಂಗವೇ ಪೂಜಾಸ್ಥಾನವಾಗಿದೆ.

**ವಿರಾಮ**

**ಮರಾ ಮರಾ ಎಂದು**
**ಜಪಿಸುತ್ತ ಜಪಿಸುತ್ತ ವಾಲ್ಮೀಕಿಯಾದ ಬೇಡ!**
**ಮರಗಳೇ ಇಲ್ಲದ ಕಾಲದಲ್ಲಿ**
**ಎಲ್ಲಿಯ ರಾಮ,**
**ಎಲ್ಲಿಯ ವಾಲ್ಮೀಕಿ?** (ಸಿಪಿಕೆ ಸಮಗ್ರ ಕವಿತೆ, ಪು. ೩೭೧)

ರಾಮ, ವಾಲ್ಮೀಕಿಗಳ ಹೆಸರು ಅಂದು-ಇಂದು ಪ್ರಾಮುಖ್ಯತೆಯನ್ನು ಗಳಿಸಿದೆ, ಉಳಿಸಿಕೊಂಡಿದೆ. ಆದರೆ ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಪರಿಸರವನ್ನು ನಾಶಮಾಡುತ್ತಿದ್ದಾನೆ. ಆದ್ದರಿಂದಾಗಿ ನಾಶವಾಗುತ್ತಿರುವ ಮರಗಳ ಬಗ್ಗೆ ತಿಳಿಸುತ್ತ ಪರಿಸರದ ವಿನಾಶವನ್ನು ತಿಳಿಸುತ್ತಿದೆ.

**ವಿಪರ್ಯಾಸ**

**ಜೈಲುಗಳು ಎಷ್ಟೇ ವಿಶಾಲವಾಗಿದ್ದರೂ**
**ಸದಾ ಭರ್ತಿಯಾಗಿರುತ್ತವೆ;**
**ಆಶ್ರಮ, ದೇವಾಲಯಗಳು**
**ಎಷ್ಟೇ ಕಿರಿದಾಗಿದ್ದರೂ**
**ಬಹಳಷ್ಟು ವೇಳೆ ಖಾಲಿಯಾಗಿರುತ್ತವೆ!**
**(ದೇವರಾದರೂ ಇರುತ್ತಾನೆಯೆ?)**

(ಸಿಪಿಕೆ ಸಮಗ್ರ ಕವಿತೆ, ಪು. ೩೭೨)

ದೇವಾಲಯದಲ್ಲಿ ಇಂದು ದೇವರಿಲ್ಲ ಎಂಬುದನ್ನು ಈ ಚುಟುಕು ತಿಳಿಸುತ್ತದೆ.

**ಭೇದ**

**ಧರ್ಮ ಕಾಳು,**
**ಮತ ಹೊಟ್ಟು;**
**ಧರ್ಮ ಹೃದಯ,**
**ಮತ ಹೊಟ್ಟೆ**

(ಸಿಪಿಕೆ ಸಮಗ್ರ ಕವಿತೆ, ಪು. ೩೯೯)

ಧರ್ಮ, ಮತದ ಹೆಸರಿನಲ್ಲಿ ಕಾಣುವ ಭೇದವನ್ನು ಇದು ವ್ಯಕ್ತಪಡಿಸುತ್ತದೆ.

**ಸರಸ್ವತಿ**

**ಗಂಗೆ ಯಮುನೆಯರು**
**ಕಲುಷಿತರಾದರು;**
**ಶುದ್ಧವಾಗಿ ಉಳಿಸಿಕೊಳ್ಳೋಣ**
**ಸರಸ್ವತಿಯನ್ನಾದರೂ;**

(ಸಿಪಿಕೆ ಸಮಗ್ರ ಕವಿತೆ, ಪು. ೪೧೪)

ಇಂದಿನ ವಿದ್ಯಾ ಅಧಿದೇವತೆ ಈಕೆಯನ್ನು ಉಳಿಸಿಕೊಳ್ಳುವುದು ಎಲ್ಲರ ಆದ್ಯ ಕರ್ತವ್ಯವೂ ಆಗಿದೆ.

**ಪರದಾಟ**

**ದೇವರು, ಮೋಕ್ಷ, ಪರಲೋಕ**
**ಇತ್ಯಾದಿಗಳನ್ನು ಕುರಿತ**
**'ಪರದಾಟ' ನಮ್ಮ ದೇಶಕ್ಕೇ**
**ವಿಶಿಷ್ಟ!** (ಸಿಪಿಕೆ ಸಮಗ್ರ ಕವಿತೆ, ಪು. ೪೨೨)

ಈ ಪರದಾಟಗಳು ನಮ್ಮ ಭಾರತ ದೇಶದ ಅವಿಭಾಜ್ಯ ಅಂಗವೂ ಸಹ ಆಗಿದೆ. ಪ್ರಕೃತಿಯೇ ದೇವರು ಎಂಬುದಾಗಿ ಈ ಕೆಳಗಿನ ಚುಟುಕು ತಿಳಿಸುತ್ತದೆ.

**ದೇವರು**

**ತಿಂಗ ಧವಳಿಯೆ, ಬಾನಿನ ನೀಲಿ**
**ಭೂದೇವಿಯ ಹಸುರು**
**ಇವನ್ನು ಬಿಟ್ಟರೆ ಬೇರೆಲ್ಲಿದೆ ಹೇಳಿ**
**ದೇವರು?** (ಸಿಪಿಕೆ ಸಮಗ್ರ ಕವಿತೆ, ಪು. ೪೨೫)

ವ್ಯಕ್ತಿಯು ಸಹಜವಾಗಿ ತನ್ನನ್ನು ನಂಬುವುದಿಲ್ಲ ಎಂಬುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ದ್ವೇಷ**

**ದ್ವೇಷಿಸುತ್ತೇನೆ ಮೊದಲನೆಯದಾಗಿ**
**'ದೇವರನ್ನು;**
**ಎರಡನೆಯದಾಗಿ ಕೆಲವರು**
**ಮನುಷ್ಯರನ್ನು;**
**ಮೂರನೆಯದಾಗಿ, ಎಲ್ಲಕ್ಕಿಂತ ಮಿಗಿಲಾಗಿ**
**ನನ್ನನ್ನು!** (ಸಿಪಿಕೆ ಸಮಗ್ರ ಕವಿತೆ, ಪು. ೪೩೧)

**ಶಿಲ್ಪ**

**ಬಹುಮಂದಿ**
**'ಕೊರೆಯುತ್ತಾರೆ ಬರಿದೆ;**
**ಎಲ್ಲೊ ಕೆಲವರು**
**ಕೊರೆಯ ತಡೆಯ**
**ನಿಲ್ಲಿಸುತ್ತಾರೆ!** (ಆಲಿಕಲ್ಲು ಹನಿಗವನಗಳು, ಪು. ೩)

ಶಿಲ್ಪವು ಭಾವನೆಗಳ ಪ್ರತೀಕದಂತಿದೆ. ಆದ್ದರಿಂದ ಶಿಲ್ಪಗಳು ತನ್ನದೇ ರೀತಿಯ ಭಂಗಿಯಲ್ಲಿ ವಿವಿಧ ಭಾವನೆಗಳನ್ನು ವ್ಯಕ್ತಪಡಿಸುತ್ತದೆ.

**ಮತ(ತಿ)**

**ಬಹುಮಂದಿಯ ದೃಷ್ಟಿ**
**ಮತೀಯ;**
**ಎಲ್ಲೋ ಕೆಲವರದು**
**ಮತಿನಿಷ್ಠ!**

(ಆಲಿಕಲ್ಲು ಹನಿಗವನಗಳು, ಪು. ೪)

ಮತೀಯತೆಯ ದೃಷ್ಟಿ ಅಂಧತನವನ್ನು ಹೊಂದುದಾಗಿದೆ.

**ಅಸ್ತಿತ್ವ**

**ದೇವರು**
**ದೇಗುಲದಲ್ಲೆ**
**ಇರುತ್ತಾನೆಂಬ**
**ಭ್ರಮೆ ಬೇಡ;**
**ದೇಗುಲದ 'ಲ್ಲೊ'**
**ಇರಬಹುದು, ಅಷ್ಟೆ!**

(ಆಲಿಕಲ್ಲು ಹನಿಗವನಗಳು, ಪು. ೮)

ದೇವರ ಮೇಲೆ ಇರುವ ಅಪನಂಬಿಕೆಯನ್ನು ಇದು ವ್ಯಕ್ತಪಡಿಸುತ್ತದೆ.

**ಅನಿಶ್ಚಿತ**

**ದೇವರಿರುವುದು**
**ನಿಶ್ಚಿತವಾಗಿದ್ದರೆ,**
**ಅವನಿಗಾಗಿ**
**ನಿಶ್ಚಿಂತೆಯಿಂದ**
**ಬಿಡಬಹುದಿತ್ತು.**
**ಹೆಣ್ಣು, ಹೊನ್ನು, ಮಣ್ಣುಗಳನ್ನು!**

(ಆಲಿಕಲ್ಲು ಹನಿಗವನಗಳು, ಪು. ೨೦)

ದೇವರ ಹೆಸರಿನಲ್ಲಿ ಮನುಷ್ಯ ಏನೆಲ್ಲಾ ಅನುಭವಿಸುತ್ತಿದ್ದಾನೆಂಬುದನ್ನು ಜೊತೆಗೆ ದೇವರ ಹೆಸರುಗಳು ಕೇವಲ ನೆಪಮಾತ್ರಕ್ಕೆ ಬಳಸುತ್ತಿದ್ದಾನೆಂಬುದನ್ನು ತಿಳಿಸುತ್ತದೆ.

**ನಿರ್ಮಾಣ**

**ದೇವರು ಎಷ್ಟು**
**ಸರಳವಾಗಿದ್ದುಕೊಂಡು,**
**ಜಗತ್ತನ್ನು ಎಷ್ಟು**
**ಸಂಕೀರ್ಣವಾಗಿ**
**ನಿರ್ಮಿಸಿದ್ದಾನೆ!** (ಕುಡಿ-ಕಿಡಿ ಹನಿಗವನಗಳು, ಪು. ೨೩)

ನಿಜವಾಗಿಯೂ ಕಣ್ಣಿಗೆ ಕಾಣದೆ, ನಮ್ಮದೇ ಕಲ್ಪನೆಯಲ್ಲಿ ಮೂರ್ತರೂಪದಲ್ಲಿರುವ ದೇವರು ಸರಳತೆಯಿಂದಲೇ ಜಗತ್ತನ್ನು ಎಷ್ಟು ಸಂಕೀರ್ಣವಾಗಿ ನಿರ್ಮಿಸಿದ್ದಾನೆಂಬುದನ್ನು ನಾವು ಕಲ್ಪನೆ ಮಾಡಿಕೊಳ್ಳುವ ಅಗತ್ಯವಿಲ್ಲ. ಪ್ರಸ್ತುತದಲ್ಲಿಯೇ ನಾವು ನೋಡುತ್ತಿದ್ದೇವೆ. ಆದ್ದರಿಂದಾಗಿಯೇ ದೇವರು ಕಣ್ಣಿಗೆ ಕಾಣದಿದ್ದರು ಆತ ದೊಡ್ಡವನೆ.

**ಅಸ್ಪೃಶ್ಯತೆ**

**ದೇವಾಲಯ**
**ನಿರ್ಮಾಣ, ದೇವರನ್ನು**
**ಅಸ್ಪೃಶ್ಯನನ್ನಾಗಿಸುವ**
**ವಿಧಾನ!** (ಕುಡಿ-ಕಿಡಿ ಹನಿಗವನಗಳು, ಪು. ೨೫)

ಅಸ್ಪೃಶ್ಯತೆಯೆಂಬುದು ಅಂದಿನ ದಿನಗಳಲ್ಲಿ ಅತ್ಯಂತ ನಿಕೃಷ್ಟವಾದ ಶೋಚನೀಯ ಸ್ಥಿತಿಯಾಗಿದೆ. ಅದು ಈಗಲೂ ಮುಂದುವರೆಯುತ್ತಿದ್ದು, ದೇವರನ್ನೇ ಅಸ್ಪೃಶ್ಯನಾಗಿಸುತ್ತಿದೆ ಎಂದು ವಿಡಂಬಡಿಸಲಾಗಿದೆ.

ಹೀಗೆ ಧಾರ್ಮಿಕ ನೆಲೆಯಲ್ಲಿ ಸಿಪಿಕೆಯವರು ಉತ್ತಮವಾದಂತಹ ಚುಟುಕುಗಳನ್ನು ರಚಿಸಿದ್ದಾರೆ.

### ೧.೩. ರಾಜಕೀಯ ನೆಲೆಯ ಚುಟುಕುಗಳು

ನಮ್ಮ ದೇಶದಲ್ಲಿ ವಿವಿಧ ಕ್ಷೇತ್ರಗಳ ಪಾತ್ರ ದೇಶದ ಬೆಳವಣಿಗೆಗೆ ಪೂರಕವಾಗಿದೆ. ಆದರೆ ಎಲ್ಲಾ ಕ್ಷೇತ್ರಗಳ ಕಾರ್ಯ ವಿಲಾಪಗಳಲ್ಲಿ ವ್ಯತ್ಯಾಸಗಳು ಆಗುವುದು ಸಹಜವಾದುದಾಗಿದೆ. ಆದರೆ ದುಷ್ಟ ಜಂತುಗಳ ಉಪಟಳದಿಂದ ಯಾವುದೇ ಕ್ಷೇತ್ರದಲ್ಲಿ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ಅದರಲ್ಲೂ ರಾಜಕೀಯ ಕ್ಷೇತ್ರವೆಂದರೆ ಹೇಳತೀರದು. ಏಕೆಂದರೆ ರಾಜಕೀಯ ಕ್ಷೇತ್ರದಲ್ಲಿ ದೇಶದ ಉದ್ಧಾರಕ್ಕಾಗಿ ಪ್ರತಿನಿಧಿಗಳಾಗಿ ಕೆಲಸಕಾರ್ಯಗಳನ್ನು ಮಾಡುತ್ತಾ ಹೋಗುತ್ತಾರೆ. ಆದರೆ ರಾಜಕೀಯವೆಂಬ ಕ್ಷೇತ್ರವನ್ನು ತಮ್ಮ ಬಂಡವಾಳವಾಗಿ ಮಾಡಿಕೊಂಡು ತಮ್ಮ ಬೇಳೆಯನ್ನು ಬೇಯಿಸಿಕೊಂಡು ತೃಪ್ತಿಕರವಾದ

ಜೀವನ ನಡೆಸುವುದರ ಮೂಲಕ ಸ್ವರ್ಗ ಲೋಕದಲ್ಲಿ ಜನರು ತೇಲಾಡುತ್ತಿದ್ದಾರೆ. ಇಂಥವರಿಗೆ ಗೌರವ ಸೂಚಿಸುವುದರಲ್ಲಿ ಯಾವುದೇ ಅರ್ಥವಿರುವುದಿಲ್ಲ.

ರಾಜಕೀಯ ಕ್ಷೇತ್ರದಲ್ಲಿ ಸಾರ್ವಜನಿಕರ ಒಳಿತಿಗಾಗಿ ದುಡಿಯಬೇಕಾದಂತಹ ಜನರೇ ಇಂದು ಸಾಮಾನ್ಯ ಜನರಿಗೆ ಸಿಂಹಸ್ವಪ್ನವಾಗಿ ಕಾಡುತ್ತಿರುವುದು ಎಷ್ಟು ಸಮಂಜಸವಾದುದಾಗಿದೆ? ಹೀಗೆ ಇಂದು ಜನರು ಸ್ವಾರ್ಥದಿಂದಲೇ ಜೀವನವನ್ನು ನಡೆಸುತ್ತಿದ್ದಾರೆ. ಹೃದಯ ವೈಶಾಲ್ಯತೆ, ನಿಸ್ವಾರ್ಥ, ಮಾನವೀಯತೆ, ಅನುಕಂಪ, ದಯೆ-ಧರ್ಮ ಇವೇ ಮುಂತಾದ ಮೌಲ್ಯಗಳಿಗೆ ಯಾವುದೇ ಬೆಲೆ ದೊರೆಯುತ್ತಿಲ್ಲ.

ಈ ನೆಲೆಯಲ್ಲಿ ಡಾ. ಸಿ.ಪಿ.ಕೆ.ಯವರು ತಮ್ಮದೇ ಆದ ರೀತಿಯಲ್ಲಿ ಅನ್ಯಾಯ, ಅಸತ್ಯ, ಅಧರ್ಮಗಳೆಂಬ ರತ್ನಖಚಿತವಾದ ಅತ್ಯಮೂಲ್ಯ ಮೌಲ್ಯಗಳನ್ನು ಚುಟುಕುಗಳ ಮೂಲಕ ಎತ್ತಿಹಿಡಿದಿದ್ದಾರೆ.

**ಅತೀತ**

**ಕೆಲವರ ಒಳ್ಳೆಯತನ**
**ಕೆಲವರ ಕೆಟ್ಟತನ**
**ಎರಡೂ**
**ಕಲ್ಪನಾತೀತ!** (ಅಹನ್ಯ ಹನಿ, ಪು. ೯)

ರಾಜಕೀಯ ರಂಗದಲ್ಲಿ ಎಲ್ಲರನ್ನು ಒಳ್ಳೆಯವರು, ಎಲ್ಲರನ್ನು ಕೆಟ್ಟವರೆಂದು ಹೇಳಲು ಅಸಾಧ್ಯವಾದುದಾಗಿದೆ. ಏಕೆಂದರೆ ವ್ಯಕ್ತಿಗಳು ಇಂತಹ ಕ್ಷೇತ್ರದಲ್ಲಿ ಯಾವಾಗ ಒಳ್ಳೆಯ-ವರಾಗುತ್ತಾರೆ. ಯಾವಾಗ ಕೆಟ್ಟವರಾಗುತ್ತಾರೆಂಬುದನ್ನು ಊಹಿಸಿಕೊಳ್ಳಲು ಅಸಾಧ್ಯವಾಗಿದೆ.

**ಅಲ್ಲಿ ಇಲ್ಲಿ**

**ಅಂತರಿಕ್ಷಯಾನ ಕೈಗೊಂಡು**
**ಸುರಕ್ಷಿತವಾಗಿ**
**ಮರಳಬಹುದು;**
**ನಮ್ಮ ಭೂಮಿಯ**
**ರಸ್ತೆಗಳಲ್ಲೆ**
**ಆ ಭರವಸೆಯಿಲ್ಲ!** (ಅಹನ್ಯ ಹನಿ, ಪು. ೨೫)

ಇಂದು ರಸ್ತೆಯ ಸಂದಿಗ್ಧ ಪರಿಸ್ಥಿತಿಯನ್ನು ಕಣ್ಣಿಗೆ ಕಟ್ಟಿಕೊಡುವಂತಹ ಚುಟುಕುವಿನ ರೂಪವಾಗಿದೆ. ನಮ್ಮ ರಸ್ತೆಗಳು ಎಷ್ಟರಮಟ್ಟಿಗೆ ಹದಗೆಟ್ಟಿದೆ ಎಂಬುದನ್ನು ಸಿಪಿಕೆಯವರು ಉತ್ತಮವಾಗಿ ನಿರೂಪಿಸಿದ್ದಾರೆ.

**ಬಿದಿರು**

**ಅನೇಕರು**
**ಬಯಸುತ್ತಾರೆ,**
**ಏನೇನೋ ಬಿರುದು;**
**ಆದರೆ ಸಿಕ್ಕುವುದು**
**ಬರಿಯ ಬಿದಿರು!** (ಅಹನ್ಯ ಹನಿ, ಪು. ೯೬)

ಸಹಜವಾಗಿ ಮನುಷ್ಯನು ತನಗೆ ದೊರೆಯುವ ಬಿರುದುಗಳಿಗೆ ಉಲ್ಲಾಸಗೊಳ್ಳುತ್ತಾನೆ. ಆದರೆ ಅವರಿಗೆ ದೊರೆಯುವುದು ಬಿದಿರು ಮಾತ್ರ. ಇದೇ ಸಂದರ್ಭದಲ್ಲಿ ಗಾದೆಯ ಮಾತೊಂದು ನೆನಪಿಗೆ ಬರುತ್ತಿದೆ. ಅತಿಯಾಸೆ ಗತಿಗೇಡು, ಎಂಬಂತೆ ಆಸೆ ಇರಬೇಕು ಆದರೆ ಅತಿಯಾಗಬಾರದು. ಬಿರುದುಗಳನ್ನು ನಾವು ಹುಡುಕಿಕೊಂಡು ಹೋಗುವುದಕ್ಕಿಂತ ನಮ್ಮನ್ನು ಹುಡುಕಿಕೊಂಡು ಅವುಗಳು ಬರಬೇಕು. ಅದೇ ನಿಜವಾದಂತಹ ಬಿರುದಾಗಿದೆ.

**ಮೂಟೆ**

**ಇಂದಿನ ಬಹುಮಂದಿ**
**ರಾಜಕಾರಣಿಗಳಿಗೆ**
**ಎಲ್ಲಿದೆ ಮುನ್ನೋಟ?**
**ಅವರ ಸದ್ಯದ ಗುರಿ**
**ಗರಿಗರಿ**
**ನೋಟುಗಳ ಮೂಟೆ**
**ಅಷ್ಟೆ!** (ಕುಡಿ-ಕಿಡಿ, ಪು. ೧೬)

ಇಂದಿನ ರಾಜಕಾರಣಿಗಳ ಮುಖ್ಯ ಉದ್ದೇಶ ದೇಶಸೇವೆ ಅಲ್ಲ, ಬದಲಿಗೆ ನೋಟುಗಳ ಸಂಪಾದನೆಯಾಗಿದೆ. ಇಂದಿನ ರಾಜಕೀಯ ಪರಿಸ್ಥಿತಿ ಹೀಗಿದೆ.

**ಸಾಕು**

**ಹಲವರು ಪ್ರಗತಿಪರ**
**ಹೋರಾಟಗಳಲ್ಲಿ**
**ತೊಡಗುತ್ತಾರೆ;**
**ನಾನು ವಿರೋಧಿಸುವುದಿಲ್ಲ,**
**ಸಾಕು!** (ಕುಡಿ-ಕಿಡಿ, ಪು. ೨೦)

ಇಂದಿನ ರಾಜಕಾರಣದಲ್ಲಿ ಹಲವರು ಪ್ರಗತಿಪರ ಹೋರಾಟಗಳಲ್ಲಿ ತೊಡಗುತ್ತಾರೆ. ವಿರೋಧವೇನು ವ್ಯಕ್ತಪಡಿಸಬೇಕಿಲ್ಲ. ವಿರೋಧದ ಬೆನ್ನ ಹಿಂದೆ ಇರುವ ನೈಜತೆ ತನಗೆ ತಾನೆ ಸೀಮಿತ ಅವಧಿಯಲ್ಲಿ ಹೊರಬರುತ್ತದೆ. ಆದ್ದರಿಂದಲೇ ಸಾಕು ಎಂಬುದಾಗಿ ತಿಳಿಸಲಾಗುತ್ತಿದೆ.

**ಸಮಾಧಿ**

**ರಾಜಕಾರಣಿಗಳನ್ನು**
**ಮಠಾಧೀಶರನ್ನು**
**ಬದುಕಿರುವಾಗಲೇ**
**ಹೂಗಳ ರಾಶಿಯಲ್ಲಿ**
**ಸಮಾಧಿ ಮಾಡುವುದೇಕೆ?** (ಕುಡಿ–ಕಿಡಿ, ಪು. ೨೬)

ಮಠಾಧೀಶರಾಗಬಹುದು, ರಾಜಕಾರಣಿಗಳಾಗಬಹುದು. ಯಾವಾಗಲು ದೇಶದ ಅಭಿವೃದ್ಧಿಪರ ಕೆಲಸಗಳನ್ನು ಮಾಡುವುದಿಲ್ಲ. ಆದರೆ ಇಂದು ನಮ್ಮ ಸಮಾಜದಲ್ಲಿ ಅವರೇ ನಮ್ಮ ಮಹಾನ್‌ವ್ಯಕ್ತಿಗಳು. ಹಲ್ಲಿದ್ದವರಿಗೆ ಕಡ್ಲೆ ಇಲ್ಲ, ಕಡ್ಲೆ ಇದ್ದವರಿಗೆ ಹಲ್ಲಿಲ್ಲ ಎಂಬ ಗಾದೆ ಮಾತಿನಂತೆ ಈ ಮೇಲಿನ ಚುಟುಕು ಸಾಕ್ಷಿಯಾಗಿದೆ.

**ಸ್ವಾತಂತ್ರ್ಯ**

**ಸ್ವಾತಂತ್ರ್ಯ ಬಂದದ್ದು**
**ದೇಶಕ್ಕಲ್ಲ**
**ರಾಜಕಾರಣಿಗಳ**
**'ಬಹುಕೃತವೇಷಕ್ಕೆ',**
**ಗೋಸುಂಬೆತನಕ್ಕೆ!** (ಕುಡಿ–ಕಿಡಿ, ಪು. ೨೭)

ಸ್ವಾತಂತ್ರ್ಯ ಬಂದದ್ದು ನೋಟಿನ ಮೇಲೆ ನೋಟನ್ನು ಎಣಿಸಿಕೊಳ್ಳುವ ರಾಜಕಾರಣಿಗಳಿಗೆ ಮಾತ್ರ ವಿವಿಧ ವೇಷಧರಿಸಿ, ಗೋಸುಂಬೆ ರೀತಿ ಬಣ್ಣ ಬದಲಾಯಿಸುತ್ತಿರುತ್ತಾರೆ. ಆದ್ದರಿಂದಾಗಿ ಸ್ವಾತಂತ್ರ್ಯವೆಂಬುದು ರಾಜಕಾರಣಿಗಳಿಗೆ ಹೊರತು ಬೇರೆ ಸಾಮಾನ್ಯ ವ್ಯಕ್ತಿಗಳಿಗಲ್ಲ.

**ಕಲ್ಲು**

**ಮೂತ್ರಕೋಶದ**
**ಕಲ್ಲುಗಳನ್ನು**
**ಕರಗಿಸಬಹುದು;**
**ಆದರೆ ಕಲ್ಲು ಹೃದಯಗಳನ್ನು**
**ಕರಗಿಸುವುದೆಂತು?** (ಕುಡಿ–ಕಿಡಿ, ಪು. ೪೪)

ರಾಜಕೀಯ ವ್ಯಕ್ತಿಗಳು ಕಲ್ಲುಹೃದಯವಂತರು ಎಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ಆಶ್ವಾಸನೆ ಕೊಡುವುದಷ್ಟೇ ಅವರ ಕರ್ತವ್ಯವಾಗಿದೆ. ಆದರೆ ಗೆದ್ದ ನಂತರ

ಯಾವುದೇ ಕೆಲಸಕಾರ್ಯಗಳನ್ನು ಮಾಡದೆ ಕಲ್ಲು ಹೃದಯದವರಂತೆ ವರ್ತಿಸುತ್ತಾರೆ. ಆದ್ದರಿಂದ ಇಂತಹವರನ್ನು ಕರಗಿಸುವುದು ಬಹಳ ಕಷ್ಟ.

**ಸೂತ್ರ**

**ಯಾವುದೋ**
**ನ್ಯಾಯದ ಸೂತ್ರ**
**ನೇಯ್ದಾಳುತ್ತಿದೆ,**
**ಲೋಕವನ್ನು!** (ಕುಡಿ–ಕಿಡಿ, ಪು. ೪೯)

ನ್ಯಾಯ ಎಲ್ಲರಿಗೂ ಕೂಡ ಒಂದೇ ಆಗಿರಬೇಕು. ಇಂತಹ ನ್ಯಾಯದ ತೊಳಲಾಟ ಇಡೀ ಲೋಕವನ್ನು ಒಯ್ದಾಡಿಸುತ್ತಿದೆ. ಹೀಗೆ ಇಂತಹ ಅನೇಕ ಸೂತ್ರಗಳನ್ನು ಜನರ ಮೇಲೆ ಹೇರಲಾಗುತ್ತಿದೆ.

**ಭಾರತ**

**ಸ್ವಾತಂತ್ರ್ಯ ಸಂಗ್ರಾಮಕ್ಕೆ**
**ಅಸೀಮ ಸ್ಫೂರ್ತಿಯಿತ್ತ**
**ವಿವೇಕಾನಂದರ**
**ಭಾರತವೀಗ**
**ವಿವೇಕಹೀನ**
**ವಿಕೃತಾನಂದರ ಭಾರತವಾಗುತ್ತಿದೆಯೆ?** (ಕುಡಿ–ಕಿಡಿ, ಪು. ೭೯)

ಸ್ವಾಮಿವಿವೇಕಾನಂದರು ತಮ್ಮದೇ ಆದ ಹೇಳಿಕೆಗಳ ಮೂಲಕ ಯುವಕರನ್ನು ಬಡಿದೆಬ್ಬಿಸಿದರು. ಇವರ ವಿವೇಕಯುಕ್ತ ಚಿಂತನೆಗಳು ಇಂದು ವಿವೇಕಹೀನತೆಯನ್ನು ಕಳೆದುಕೊಂಡಿರುವಂತಹ ಭಾರತವಾಗಿದೆ. ಅಂದು ಮತ್ತು ಇಂದು ಭಾರತದಲ್ಲಿ ಸಾಕಷ್ಟು ಬದಲಾವಣೆಗಳನ್ನು ಕಾಣಲಾಗಿದೆ.

**ಏಣಿ**

**ಹತ್ತಿದ ಏಣಿಯನ್ನು**
**ಯಾರೂ ಒದೆಯಲಾಗದು;**
**ಮತ್ತೆ ಇಳಿದು ಬರುವುದಕ್ಕೆ**
**ಬೇಕಲ್ಲವೆ?** (ಕುಡಿ–ಕಿಡಿ, ಪು. ೮೬)

ಯಾವುದೇ ವ್ಯಕ್ತಿಯು ಒಂದಲ್ಲ ಒಂದು ಸಾಧನೆಯನ್ನು ಮಾಡಬೇಕೆಂದು ನಿರ್ಧರಿಸಿರುತ್ತಾನೆ. ಸಾಧನೆ ಮಾಡಲು ಕಷ್ಟದ ಮೆಟ್ಟಿಲುಗಳನ್ನು ಏರಿಕೊಂಡು

ಹೋಗಬೇಕಾಗುತ್ತದೆ. ಹಾಗೆಯೇ ಉನ್ನತ ಸ್ಥಾನವನ್ನು ಪಡೆದುಕೊಂಡ ನಂತರ ಶಾಶ್ವತವಾಗಿ ಅದರಲ್ಲೇ ಮುಂದುವರೆಯಲು ಸಾಧ್ಯವಿಲ್ಲ. ಆದ್ದರಿಂದ ಹತ್ತಿದ ಏಣಿಯನ್ನು ಯಾವತ್ತೂ ಒದೆಯಲಾಗುವುದಿಲ್ಲ. ಆದ್ದರಿಂದ ಮೇಲಕ್ಕೆ ಹತ್ತಿದಾಗ ಹಿಂದಿನ ಹೆಜ್ಜೆ ಗುರುತುಗಳನ್ನು ಮರೆಯಲು ಸಾಧ್ಯವಿಲ್ಲ.

**ಅನಾಸಕ್ತಿ**

**ಈಗಿನ**
**ಯುವ ಜನಾಂಗಕ್ಕೆ**
**'ವಿಷಯಾ'ಸಕ್ತಿಯೆ ಇಲ್ಲ**
**ಎಂಬುದು**
**ಎಂಥ ವಿಪರ್ಯಾಸ** (ಕುಡಿ–ಕಿಡಿ, ಪು. ೯೧)

ಇಂದಿನ ಯುವ ಜನಾಂಗದವರಿಗೆ ವಿಷಯದ ಆಸಕ್ತಿಯೇ ಇಲ್ಲ. ಏಕೆಂದರೆ ಜವಾಬ್ದಾರಿಯೆಂಬುದು ಯುವಕರಲ್ಲಿ ಮೊದಲೇ ಇಲ್ಲ. ಆದ್ದರಿಂದ ಇಂತಹ ಯುವಕರೇ ಮುಂದಿನ ದೇಶದ ಪ್ರಜೆಗಳೆಂದು ಹೇಗೆ ಹೇಳಲು ಸಾಧ್ಯವಾಗುತ್ತದೆಂಬುದನ್ನು ಚುಟುಕು ಪ್ರತಿನಿಧಿಸುತ್ತದೆ.

**ಅಸಭ್ಯತೆ**

**'ಸಭ್ಯತಾ ಸೇವತೆ'**
**ಎಂದು**
**ಕರೆದರು**
**ರಾಷ್ಟ್ರ'ಪಿತ'ನನ್ನು ಕವಿ;**
**ಇಂದು ಎಲ್ಲೆಲ್ಲೂ 'ಮಕ್ಕಳ'**
**ನಡೆನುಡಿ ಅಸಭ್ಯ!**
**ಮತ್ತೊಬ್ಬ ಕವಿ ಕನಸಿ,**
**'ಸ್ವಾತಂತ್ರ್ಯದ ಸ್ವರ್ಗ'**
**ಎಂದು, ಎಂತು ಲಭ್ಯ?** (ಕುಡಿ–ಕಿಡಿ, ಪು. ೧೦೦)

ಇಂದು ನಮ್ಮ ದೇಶದಲ್ಲಿ ಸಭ್ಯತೆಯೆಂಬುದು ಕಣ್ಮರೆಯಾಗುತ್ತಿದೆ. ಏಕೆಂದರೆ ಇಂದು ಯುವಕರಲ್ಲಿ ಸಭ್ಯತೆಯೇ ಇಲ್ಲ. ಅಂದು ಮಹಾನ್ ವ್ಯಕ್ತಿಗಳು ಸಭ್ಯತೆಗೆ ಕೊಟ್ಟಂತಹ ಪ್ರಾಮುಖ್ಯತೆ ಇಂದು ಅಸಭ್ಯತೆಗೆ ಕೊಡುತ್ತಿದ್ದಾರೆ ಎಂದರೆ ಕಾಲ ಎಂಬುದು ಎಷ್ಟರಮಟ್ಟಿಗೆ ಬದಲಾಗುತ್ತಿದೆಂಬುದನ್ನು ವ್ಯಕ್ತಪಡಿಸುತ್ತದೆ ಈ ಮೇಲಿನ ಚುಟುಕು.

ಹೊರಗೆ – ಒಳಗೆ

ಹೊರಗೆ ಎಲ್ಲರೂ
ತೊಡುತ್ತಾರೆ
'ಯೂನಿಫಾರಂ;
ಮನೆಯೊಳಗೋ
ಅವರವರದೇ
ವಿಶಿಷ್ಟ ವೇಷ! (ಕುಡಿ–ಕಿಡಿ, ಪು. ೧೨೮)

ಇಂದು ರಾಜಕೀಯ ವ್ಯಕ್ತಿಗಳು ಧರಿಸುತ್ತಾರೆ. ಪರಿಶುದ್ಧತೆಯ ಸಂಕೇತವಾದಂತಹ ಬಿಳಿವಸ್ತ್ರವನ್ನು, ಆದರೆ ಮನಸ್ಸಿನಲ್ಲಿ ಹೆಚ್ಚಾಗಿ ಕಲ್ಮನವೇ ತುಂಬಿರುತ್ತದೆ. ಹೀಗೆ ಒಳಗೊಂದು ಹೊರಗೊಂದು ವೇಷಭೂಷಣವನ್ನು ಹೊಂದಿರುತ್ತಾರೆ.

ನಾಪತ್ತೆ

ಗಾಂಧಿನಗರಗಳಲ್ಲಿ, ಗಾಂಧಿ ರಸ್ತೆಗಳಲ್ಲಿ,
ಗಾಂಧಿ ಬಜಾರುಗಳಲ್ಲಿ, ಗಾಂಧಿ ಮಂದಿರಗಳ್ಲಿ,
ಕಡೆಗೆ ಎಲ್ಲೆಡೆಗಳಲ್ಲಿ ಹುಡುಕಿದ್ದಾಯಿತು
ಗಾಂಧಿಯನ್ನು.
ಸಿಗಲಿಲ್ಲ ಮಾರಾಯ; ಕಡೆಗೆ ಸಿಕ್ಕಿದ್ದು
ಮ್ಯೂಸಿಯಂನಲ್ಲಿ
ಪ್ರಾಣ ಇಲ್ಲಿ ಸತ್ತು ಅಲ್ಲಿ ಹುಟ್ಟಿತ್ತು;
ಅಲ್ಲಿಯೂ ಬಡಪಾಯಿಗಿಲ್ಲ ಹಳೆಯ ಕತ್ತಿ, ಗುರಾಣಿ
ಗಳಿಗಿರುವ ಕಿಮ್ಮತ್ತು! (ಸಿಪಿಕೆ ಸಮಗ್ರ ಕವಿತೆ, ಪು. ೧೯೫)

ಮಹಾತ್ಮಗಾಂಧೀಜಿಯವರು ಇಂದು ಮ್ಯೂಸಿಯಂನಲ್ಲಿ ದೊರೆಯುತಿದ್ದಾರೆ. ಇವರ ಆದರ್ಶಗಳು ಎಷ್ಟರಮಟ್ಟಿಗೆ ಜಾರಿಗೆ ಬಂದಿವೆ ಎಂಬ ಪ್ರಶ್ನೆಗೆ ಪ್ರಸ್ತುತ ನೋಡುತ್ತಿದ್ದರೆ ನಮಗೆ ಉತ್ತರ ಸಿಗುತ್ತದೆ. ಮ್ಯೂಸಿಯಂನಲ್ಲಿ ಪುರಾತನ ವಸ್ತುಗಳಿಗೆ ಮಾತ್ರ ಬೆಲೆ ಇರುತ್ತದೆ. ಆದರೆ ಗಾಂಧಿಗೆ ಅಲ್ಲಿಯೂ ಕತ್ತಿ, ಗಉರಾಣಿಗೆ ಸಿಗುತ್ತಿರುವ ಬೆಲೆ ದೊರೆಯುತ್ತಿಲ್ಲ ಎಂಬುದನ್ನು ಇದು ಸೂಚಿಸುತ್ತದೆ.

ಬೆಳವಣಿಗೆ

ಕೆಲವರ ಬೆಳವಣಿಗೆ
ಎತ್ತರದಲ್ಲಿ;
ಮತ್ತೆ ಹಲವರದು

**ಸುತ್ತಳತೆಯಲ್ಲಿ**
**ಅವರು ಏರುತ್ತಾರೆ, ಹಾರುತ್ತಾರೆ;**
**ಇವರು ಶಾಶ್ವತವಾಗಿ ಕೂರುತ್ತಾರೆ!**

(ಸಿಪಿಕೆ ಸಮಗ್ರ ಕವಿತೆ, ಪು. ೧೯೮)

ರಾಜಕೀಯವೆಂಬ ಕ್ಷೇತ್ರದಲ್ಲಿ ಇಂತಹ ನೈಜ ಬೆಳವಣಿಗೆಯನ್ನು ನಾವು ನೋಡಬಹುದಾಗಿದೆ. ಮನುಷ್ಯನ ದೈಹಿಕ ಬೆಳವಣಿಗೆ ಹೇಗೆ ಆಗುತ್ತದೆಯೋ ಹಾಗೆಯೇ ರಾಜಕೀಯ ಕ್ಷೇತ್ರದಲ್ಲಿಯೂ ಏರಿಕೆ, ಇಳಿಕೆ, ಕೊನೆಗೆ ಶಾಶ್ವತವಾಗಿ ಕೂರುವಂತಹ ಪರಿಸ್ಥಿತಿಯೂ ಕೂಡ ಬರುತ್ತದೆಂಬುದನ್ನು ಈ ಚುಟುಕು ತಿಳಿಸುತ್ತದೆ.

**ಪಕ್ಷಾಂತರ**

**ರಾಜಕೀಯದಲ್ಲಿ ಪಕ್ಷಾಂತರ ತಡೆಗಟ್ಟುವ**
**ಶಾಸನ ಮಾಡಬಹುದು;**
**ಸಾಹಿತ್ಯದಲ್ಲಿ ಮಾಡಬಹುದೇ?**
**ಅನಧಿಕೃತ ಶಾಸನಕರ್ತರಿಗೆ**
**ಬೆಲೆಯುಂಟೆ?**

(ಸಿಪಿಕೆ ಸಮಗ್ರ ಕವಿತೆ, ಪು. ೨೧೫)

ಪಕ್ಷಾಂತರಗಳು ರಾಜಕೀಯ ಕ್ಷೇತ್ರದಲ್ಲಿ ನಿರಂತರವಾಗಿ ನಡೆಯುತ್ತಿರುತ್ತದೆ. ಆದರೆ ಸಾಹಿತ್ಯದಲ್ಲಿ ಇಂತಹ ಪಕ್ಷಾಂತರ ಇಲ್ಲ. ಆದರೆ ಇಂತಹ ಪಕ್ಷಾಂತರದ ಶಾಸನಕರ್ತರಿಗೆ ಯಾವುದೇ ಬೆಲೆಯೂ ಇರುವುದಿಲ್ಲವೆಂಬುದನ್ನು ಇದು ಸೂಚಿಸುತ್ತದೆ.

**ಕಲ್ಲು**

**ಮಂತ್ರಿಗಳಿಡುವ ಕಲ್ಲುಗಳು**
**ಎಷ್ಟೋ ಸಲ ಉಳಿಯುತ್ತದೆ**
**ಬಹಳ ಸಲ ಉಳಿಯುತ್ತವೆ**
**ಬರಿಯ ಕಲ್ಲುಗಳಾಗಿ;**
**ವಿರಳ ಸಂದರ್ಭಗಳಲ್ಲಿ ಮಾತ್ರ**
**ಅರಳುತ್ತದೆ ಅಹಲ್ಯೆಯಾಗಿ!**

(ಸಿಪಿಕೆ ಸಮಗ್ರ ಕವಿತೆ, ಪು. ೩೭೧)

ಮಂತ್ರಿಗಳು ನೀಡುವ ಆಶ್ವಾಸನೆಗಳು ಜೀವವಿಲ್ಲದ ಕಲ್ಲುಗಳಾಗಿರುತ್ತವೆ. ಹಾಗೆಯೇ ಕೆಲವು ಸಂದರ್ಭಗಳಲ್ಲಿ ಮಾತ್ರ ಆಶ್ವಾಸನೆ ಜಾರಿಗೆ ಬರುತ್ತದೆ.

**ಸಮಜಾಯಿಷಿ**

**ನಮ್ಮ ರಾಜಕಾರಣಿಗಳನ್ನು**
**ಹೇಳಬಹುದು (ಜನರಿಗೆ)**
**ಸಲೀಸಾಗಿ:**
**ರಸ್ತೆಗಳ ದುರವಸ್ಥೆಯಿಂದ**
**ವಾಹನಾಪಘಾತಳಾಗುತ್ತವೆ ಎಂಬ**
**ದೂರನ್ನತ್ತ ಬಿಸಾಕಿ!**
**ಆಗುತ್ತಿಲ್ಲವೆ ಆಕಾಶಮಾರ್ಗದಲ್ಲೆ**
**ವಿಮಾನಗಳ ಡಿಕ್ಕಿ?**

(ಸಿಪಿಕೆ ಸಮಗ್ರ ಕವಿತೆ, ಪು. ೩೭೮)

ನಮ್ಮ ರಾಜಕಾರಣಿಗಳು ಮಾಡುತ್ತಿರುವ ಕೆಲಸದ ವೈಖರಿಯನ್ನು ಇದು ಚಿತ್ರಿಸುತ್ತದೆ.

**ಮಸಿ**

**ಎಲ್ಲರೂ ಪ್ರತಿನಿತ್ಯ**
**ಮಸಿ ಹಚ್ಚುವವರೇ**
**ಗಾಂಧಿಯ ಮುಖಕ್ಕೆ!**
**ಆ ಕೆಲಸ ಅಕ್ಷರಶಃ ನಡೆಯುತ್ತದೆ**
**ಅಂಚೆ ಕಛೇರಿಗಳಲ್ಲಿ**

(ಸಿಪಿಕೆ ಸಮಗ್ರ ಕವಿತೆ, ಪು. ೩೮೬)

ಮಸಿ ಎಂಬ ಕಲೆ ಮಹಾನ್ ವ್ಯಕ್ತಿಯಾದರು ಬಿಡುವುದಿಲ್ಲವೆಂಬುದನ್ನು ಈ ಚುಟುಕು ವಿಡಂಬಿಸಿದೆ.

**ನಷ್ಟ**

**ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರ,**
**ಕಂದಾಚಾರ ಇತ್ಯಾದಿ 'ಚಾರ'ಗಳ ನಡುವೆ**
**ವಿಚಾರ**
**ಕಳೆದುಹೋದದ್ದು ಭಾರತದ**
**ಗ್ರಹಚಾರ!**

(ಸಿಪಿಕೆ ಸಮಗ್ರ ಕವಿತೆ, ಪು. ೪೦೨)

ಇದು ನಮ್ಮ ದೇಶದ ಅವ್ಯವಸ್ಥೆಯನ್ನು ಎತ್ತಿ ಹಿಡಿದಿದೆ

**ರತ**

**ಈಗೆಲ್ಲಿ**

**ಅತಿರಥ ಮಹಾರಥರು?**

**ಈಗಿರುವವರೆಲ್ಲ**

**ಅತಿರತ, ಮಹಾರತರು ಮಾತ್ರ!** (ಸಿಪಿಕೆ ಸಮಗ್ರ ಕವಿತೆ, ಪು. ೪೦೩)

ಇಂದು ಇರುವವರೆಲ್ಲ ಮಹಾನ್ ವ್ಯಕ್ತಿಗಳಲ್ಲ, ಇಂತಹ ಅನಾಚಾರಗಳನ್ನು ನಡೆಸುವ ವ್ಯಕ್ತಿಗಳೆಂಬುದನ್ನು ಇದು ತಿಳಿಸುತ್ತದೆ.

**ಎಂತು?**

**ಭೂತದ ಬಸಿರ ಕೆಸರಿನಲ್ಲಿ**

**ಹೂತ ಭಾರತ**

**ವರ್ತಮಾನದಲ್ಲಿ ಹೂತ**

**ಮರವಾಗುವುದೆಂತು?**

**ಭವಿಷ್ಯದಲ್ಲಿ ಫಲಿಸುವುದೆಂತು?** (ಸಿಪಿಕೆ ಸಮಗ್ರ ಕವಿತೆ, ಪು. ೪೦೩)

ಈ ಮೇಲಿನ ಚುಟುಕು ಭಾರತದ ಬೆಳವಣಿಗೆಯನ್ನು ಪ್ರಶ್ನಿಸುತ್ತಿದೆ.

**ಮತಾಂಧತೆ**

**ವೋಟಿನ ಮೇಲಷ್ಟೆ ಕಣ್ಣಿಟ್ಟು**

**ಕೆಲಸಮಾಡುವ ಮಂದಿ**

**ನಿಜವಾಗಿ ಮತಾಂಧರು**

**ಮತಪೆಟ್ಟಿಗೆಯೆ ಅವರ ದೇವರು!** (ಸಿಪಿಕೆ ಸಮಗ್ರ ಕವಿತೆ, ಪು. ೪೦೭)

ರಾಜಕೀಯ ಕ್ಷೇತ್ರದಲ್ಲಿ ಮತ ಎನ್ನುವುದು ಮಹತ್ವವಾದಂತಹ ಸಾರ್ವಜನಿಕರ ಕೆಲಸ. ಆದರೆ ಇಂದು ಮತಪೆಟ್ಟಿಗೆಯೆ ಅವರ ದೇವರಾಗಿದೆ.

ವಿವಿಧ ರೂಪಗಳು ಎಷ್ಟರಮಟ್ಟಿಗೆ ತನ್ನ ಸ್ಥಾನವನ್ನು ಪಡೆದುಕೊಂಡಿದೆ ಎಂಬುದನ್ನು ಈ ಕೆಳಗಿನ ಚುಟುಕು ಚಿತ್ರಿಸುತ್ತಾ ಹೋಗುತ್ತಿದೆ.

**ವಿಶ್ವರೂಪ**

**ದ್ವಾಪರ ಯುಗದಲ್ಲಿ ಕೃಷ್ಣ ತೋರಿಸಿದ**

**ಪಾರ್ಥನಿಗೆ 'ವಿಶ್ವರೂಪ'**

**ಅದಕ್ಕಿಂತ ಅದ್ಭುತ ಇಂದಿನ ಭಾರತದಲ್ಲಿ**

**ಭ್ರಷ್ಟಾಚಾರದ ವಿಶ್ವರೂಪ**

**ಎಂಥೆಂಥ ಮಹನೀಯರಿಲ್ಲಿ**

**ಕಳೆದುಕೊಂಡಿದ್ದಾರೆ ಸ್ವಸ್ವರೂಪ!** (ಸಿಪಿಕೆ ಸಮಗ್ರ ಕವಿತೆ, ಪು. ೪೧೦)

ತನ್ನ ನಿಜಸ್ವರೂಪವನ್ನು ಮಹನೀಯರು ಇಂದು ಕಳೆದುಕೊಂಡಿದ್ದಾರೆಂಬುದನ್ನು ತಿಳಿಸುತ್ತದೆ.

**ಕತೆ**

**ಭಾರತದಲ್ಲಿ ಎಲ್ಲಿ ಹೋದರೂ**

**ಒಂದೇ ಕತೆ:**

**ಬಡತನ, ಕೊಳಕು**

**ಒಳಜಗಳ, ಮೋಸಗಳಲ್ಲಿ**

**ಮಹಾನ್ ಏಕತೆ?** (ಸಿಪಿಕೆ ಸಮಗ್ರ ಕವಿತೆ, ಪು. ೪೧೩)

ಇಂತಹ ಕೃತ್ಯಗಳಲ್ಲಿ ಭಾರತದಲ್ಲಿ ಏಕತೆಯೆಂಬುದು ಎದ್ದು ಕಾಣುವ ಒಂದು ಮುಖ್ಯ ಅಂಶವಾಗಿದೆ.

**ಲಂಚಾತೀತಿ**

**ಕೊಲೆ, ಕಳ್ಳತನ, ದರೋಡೆ**

**ಅತ್ಯಾಚಾರ, ಭ್ರಷ್ಟಾಚಾರ**

**ಯಾವ ಆರೋಪದಿಂದಾದರೂ**

**ತಪ್ಪಿಸಿಕೊಳ್ಳಬಹುದೇನೋ**

**ಕೊಟ್ಟರೆ ಲಂಚ!** (ಸಿಪಿಕೆ ಸಮಗ್ರ ಕವಿತೆ, ಪು. ೪೩೩)

ಲಂಚಭರಿತ ದೇಶ ಯಾವತ್ತೂ ಅಭಿವೃದ್ಧಿ ಹೊಂದಿದ ದೇಶವಾಗಲು ಸಾಧ್ಯವೇ ಇಲ್ಲ. ಆದರೆ ಇಂದು ಲಂಚವು ತಾಂಡವವಾಡುತ್ತಿದೆ.

**ಉಘೇ (೧)!**

**ಅಧಿಕಾರಸ್ಥರಿಗೆ ಬಹಳ ಜನ**

**ಉಘೇ ಉಘೇ ಎಂದರೆ**

**ಕೆಲವರಾದರೂ**

**ಉಗಿ, ಉಗಿ ಎನ್ನುತ್ತಾರೆ!** (ಸಿಪಿಕೆ ಸಮಗ್ರ ಕವಿತೆ, ಪು. ೪೪೧)

ಅಧಿಕಾರಸ್ಥರಿಗೆ ಯಾವುದೇ ಬೆಲೆ ಇಂದು ದೊರೆಯುತ್ತಿಲ್ಲವೆಂಬುದನ್ನು ಈ ಚುಟುಕು ಪ್ರತಿನಿಧಿಸುತ್ತದೆ.

ಹೀಗೆ ರಾಜಕೀಯ ನೆಲೆಯಲ್ಲಿ ಸಿಪಿಕೆಯವರು ಉತ್ತಮವಾದಂತಹ ಕುಟುಕುವಂತಹ ಚುಟುಕುಗಳ ಮೂಲಕ ಚುರುಕನ್ನು ಮುಟ್ಟಿಸಿದ್ದಾರೆ.

## ಹಾಸ್ಯದ ನೆಲೆಯಲ್ಲಿ ರಚಿತವಾದಂತಹ ಚುಟುಕುಗಳು

ಹಾಸ್ಯವು ನಮ್ಮ ಕನ್ನಡ ಸಾಹಿತ್ಯದಲ್ಲಿ ಒಂದು ಪ್ರಮುಖವಾದಂತಹ ನೆಲೆಯಾಗಿದೆ. ಹಾಸ್ಯವಿಲ್ಲದೆ ಜೀವನವಿಲ್ಲ. ಜೀವನದಲ್ಲಿ ಹಾಸ್ಯವಿರಬೇಕು, ಹಾಸ್ಯವು ರಸಾನುಭವವನ್ನು ನೀಡುತ್ತಾ ನಮ್ಮ ಮನಸ್ಸನ್ನು ಜೀವನವನ್ನು ಸುಂದರಗೊಳಿಸುವ ಸೊಬಗು ಹಾಸ್ಯಕ್ಕಿದೆ. ಆದ್ದರಿಂದಲೇ ಹಾಸ್ಯ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ರೂಪುಗೊಂಡಿದೆ.

ಹಾಸ್ಯದ ನೆಲೆಯ ಚುಟುಕುಗಳಲ್ಲಿ ದಿನಕರ ದೇಸಾಯಿ, ಅಕಬರ ಅಲಿಯವರ ಚುಟುಕುಗಳು ಚಿಂತನೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಆದರೆ ಡುಂಢಿರಾಜ್ ರವರಂತೆ ಸಿಪಿಕೆ ಯವರ ಚುಟುಕುಗಳಲ್ಲಿ ಹಾಸ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿರುವುದನ್ನು ಗಮನಿಸಬಹುದಾಗಿದೆ. ಆದ್ದರಿಂದಾಗಿ ಹಾಸ್ಯದ ನೆಲೆಗಳಲ್ಲಿ ರೂಪುಗೊಂಡಂತಹ ಡಾ. ಸಿ.ಪಿ.ಕೆ.ಯವರ ಚುಟುಕುಗಳು ಈ ಕೆಳಕಂಡಂತಿದೆ.

**ಮದ್ದು**

**ದಪ್ಪಗಿರುವವರನ್ನು**
**ತೆಳ್ಳಗೆ ಮಾಡುವ**
**ತೆಳ್ಳಗಿರುವವರನ್ನು**
**ದಪ್ಪಗೆ ಮಾಡುವ**
**ಮದ್ದುಗಳುಂಟಂತೆ**
**ಎರಡೂ ಬೇಡ;**
**ಉರಿಯುಂಡ ಕರ್ಪೂರದಂತೆ**
**ಕರಗಿಸುವ ಮದ್ದುಂಟೆ?** (ಕುಡಿಕಿಡಿ, ಪು. ೭)

ಉರಿಯುಂಡ ಕರ್ಪೂರದಂತೆ ಕರಗಿಸುವ ಮದ್ದು ದೊರೆತರೆ ಈಗಿನ ಜನರು ಮುಗಿಬೀಳುವುದರಲ್ಲಿ ಯಾವುದೇ ಸಂದೇಹವಿಲ್ಲ.

ನವ(ವಿ)

**ಹೆಸರಿನಲ್ಲಷ್ಟೆ;**
**ವಾಸ್ತವವಾಗಿ ಗಂಡು**
**ಮಾ'ನವ' ಅಲ್ಲ;**
**ಆದರೆ ಹೆಣ್ಣು**
**ಅಕ್ಷರಶಃ ಮಾ 'ನವಿ'!** (ಕುಡಿಕಿಡಿ, ಪು. ೩೭)

ನವ–ನವಿ ಹೀಗಿರುತ್ತದೆಂಬುದನ್ನು ಈ ಚುಟುಕು ತಿಳಿಸುತ್ತದೆ.

ಸ್ವಾಗತ

ಓ ಸಾವೆ,
ಅಗತ್ಯವಾಗಿ ಬಾ
(ಬೇಡವೆನ್ನುವುದು
ಸಾಧ್ಯವೆ!)
ಆದರೆ ಹೇಳಿ
ಬರುವುದಕ್ಕೆ ಏನು ರೋಗ?

(ಕುಡಿಕಿಡಿ, ಪು. ೪೮)

ಸಾವಿಗೆ ಹೇಳಿ ಬಾ ಎಂದು ಆಜ್ಞಾಪಿಸುವುದು ಹಾಸ್ಯಾಸ್ಪದವಾಗಿದೆ.

ಸುಪ್ತ

ಕೇವಲ ಪ್ರತಿಭೆ
ಸುಪ್ತ,
ಭೂಗತ
ತರಕಾರಿಯಂತೆ!

(ಕುಡಿಕಿಡಿ, ಪು. ೧೦೩)

ಪ್ರತಿಭೆಯನ್ನು ತರಕಾರಿಗೆ ಹೋಲಿಸಿರುವುದು ಔಚಿತ್ಯವಾಗಿದೆ.

ಪ್ರಸ್ತುತದಲ್ಲಿ ವೇಷ-ಭೂಷಣವನ್ನು ಹಾಸ್ಯದ ರೀತಿಯಲ್ಲಿ ಡಾ. ಸಿಪಿಕೆ ಯವರು ಚಿತ್ರಿಸಿದ್ದಾರೆ.

ಅಂಗಿ

ಕೆಲವರು
'ಪೂರ್ಣಾಂಗಿ'ಯರು;
ಮತ್ತೆ ಕೆಲವರು
'ಅರ್ಧಾಂಗಿ'ಯರು
ಇನ್ನು ಕೆಲವರು
'ಕಾಲಂಗಿಯರು'
ಎಂಬುದೂ ಸಂದೇಹ!

(ಕುಡಿಕಿಡಿ, ಪು. ೧೪೦)

ಈ ಕೆಳಗಿನ ಚುಟುಕು ನಮ್ಮ ದೇಶದ ಸೋಮಾರಿಗಳ ಸೋಮಾರಿತನವನ್ನು ವ್ಯಕ್ತಪಡಿಸುತ್ತದೆ.

**ವಿಶ್ರಾಂತಿ**

**ನಮ್ಮಲ್ಲಿ ಬಹುಮಂದಿ**
**ದುಡಿದು ವಿಶ್ರಾಂತಿ ಬಯಸಿದರೆ**
**ಅನೇಕರು ಚೆನ್ನಾಗಿ ಉಂಡು**
**ವಿಶ್ರಾಂತಿ ಪಡೆಯುತ್ತಾರೆ!** (ಅಹನ್ಯ–ಹನಿ, ಪು. ೩)

**ವಿಕಾಸ**

**ಮೊದಲು ಹೆಣ್ಣು;**
**ಆಮೇಲೆ ಪ್ರೇಯಸಿ;**
**ಮುಂದೆ ಹೆಂಡತಿ;**
**ಕಡೆ ಕಡೆಗೆ**
**"ಪ್ರಾಣ ಹಿಂಡುತಿ!"** (ಅಹನ್ಯ–ಹನಿ, ಪು. ೨೯)

ಹೀಗೆ ಹೆಣ್ಣು ಯಾವ ರೀತಿಯಲ್ಲಿ ಗಂಡಿಗೆ ಚಿತ್ರಹಿಂಸೆ ನೀಡುತ್ತಾಳೆಂಬುದನ್ನು ವಿಡಂಬಿಸಿರುವುದು ಕಂಡುಬರುತ್ತದೆ.

ಪರಿಹಾರವೆಂಬುದು ಹೀಗಿರುತ್ತದೆಂಬುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಪರಿಹಾರ**

**"ಧ್ಯಾನದಿಂದ ನಿಮ್ಮ ಸಮಸ್ಯೆಗಳನ್ನು**
**ಪರಿಹರಿಸಿಕೊಳ್ಳಿ" ಎಂದು**
**ಜಾಹೀರಾತು!**
**'ಸಮಾಧಿ'ಯಿಂದ**
**ಇನ್ನೂ ಚೆನ್ನಾಗಿ**
**ಪರಿಹರಿಸಿಕೊಳ್ಳಬಹುದು!** (ಅಹನ್ಯ–ಹನಿ, ಪು. ೨೯)

**ಅದೃಷ್ಟ**

**ಮೊಡವೆಯ**
**ಅದೃಷ್ಟವೇ ಅದೃಷ್ಟ;**
**ಅದಕ್ಕೂ ಸಲ್ಲುತ್ತದೆ,**
**ಕೆಲವೊಮ್ಮೆ ನಲ್ಲನ ಮುತ್ತು!**

(ಅಹನ್ಯ–ಹನಿ, ಪು. ೫೬)

ಹೀಗೆ ನಲ್ಲನಿಂದ ಮೊಡವೆಯೂ ಮುತ್ತನ್ನು ಪಡೆದುಕೊಳ್ಳುತ್ತದೆಂಬುದರಲ್ಲಿ ಹಾಸ್ಯವಿದೆ.

**ಅಗತ್ಯ**

**"ವಿವಾಹ ವಿಚ್ಛೇದನ**
**ಪಡೆಯಲು ಏನು ಮಾಡಬೇಕು?"**
**"ಮೊದಲು**
**ವಿವಾಹವಾಗಬೇಕು!"**

(ಅಹನ್ಯ-ಹನಿ, ಪು. ೧೨೨)

ವಿವಾಹವಾದ ನಮತರವೇ ವಿವಾಹ ವಿಚ್ಛೇದನವಾಗುತ್ತದೆ.

**ಹಾಸ್ಯಾಸ್ಪದ**

**ನಗಿಸುವ ಪ್ರಯತ್ನ**
**ಮಾಡಿದರೆ**
**ಹಾಸ್ಯ ಹುಟ್ಟಬಹುದು;**
**ನಗುವುದೇ ಇಲ್ಲ,**
**ನಗಿಸುವುದೇ ಇಲ್ಲ**
**ಎಂಬು ಪ್ರತಿಜ್ಞೆ ಮಾಡಿದರೆ**
**ಹಾಸ್ಯಾಸ್ಪದವಾಗಬಹುದು!**

(ಅಹನ್ಯ-ಹನಿ, ಪು. ೧೩೬)

ಇದುವೇ ಹಾಸ್ಯ ಎಂಬುದಾಗಿದೆ.

ಡಾ. ಸಿ.ಪಿ.ಕೆ. ಯವರು ರೇಖೆ ಎಂಬ ಶೀರ್ಷಿಕೆಯ ಮೂಲಕ ಈ ಚುಟುಕುವಿನಲ್ಲಿ ಹೀಗೆ ಹೇಳಿದ್ದಾರೆ.

**ರೇಖೆ**

**ಬಡತನ ರೇಖೆಯೆಂದರೆ ಏನೆಂಬುದು**
**ನಮ್ಮಲ್ಲಿ ಬಹಳ ಜನಕ್ಕೆ ಗೊತ್ತಿಲ್ಲ;**
**ಅವರಿಗೆ ಗೊತ್ತಿರುವ ಸತ್ವ**
**ಚಿತ್ರತಾರೆ ರೇಖಾ ಮಾತ್ರ!**

(ಅಹನ್ಯ-ಹನಿ, ಪು. ೧೩೬)

ವಿಪರ್ಯಾಸದ ಬಗ್ಗೆ ಸಿಪಿಕೆಯವರು ಉತ್ತಮವಾಗಿ ಹೇಳಿದ್ದಾರೆ.

**ವಿಪರ್ಯಾಸ**

**ಆತ ಮತ್ತೆಲ್ಲವನ್ನೂ ಮರೆತು,**
**ಸ್ತ್ರೀಯರನ್ನು ಒಲಿಸಿಕೊಳ್ಳುವುದು ಹೇಗೆಂಬ**
**ವಿಷಯದಲ್ಲಿ ಸುದೀರ್ಘ ಸಂಶೋಧನೆ ನಡೆಸಿ,**
**ಬರೆಯ ಪ್ರಕಟಿಸಿ ಭಾರಿ ಹೊತ್ತಗೆ,**
**ಸಂತೃಪ್ತಿಯ ನಿಟ್ಟುಸಿರು ಬಿಡುವ ಹೊತ್ತಿಗೆ**
**ಯಾರೋ ಅವನ ಹೆಂಡತಿಯನ್ನು**
**ಒಲಿಸಿಕೊಂಡಿದ್ದರು!**

(ಸಿಪಿಕೆ ಸಮಗ್ರ ಕವಿತೆ, ಪು. ೨೦೦)

ಹುಡುಗಿಯರ ಜಡೆ ಹುಡುಗರಿಗೆ ಉರುಳಾಗಿ ಪರಿಣಮಿಸುತ್ತದೆಂಬುದನ್ನು ಈ ಕೆಳಗಿನ ಚುಟುಕು ವ್ಯಕ್ತಪಡಿಸುತ್ತದೆ.

**ಉರುಳು**

**ಕೆಲವರು ಹುಡುಗಿಯರ ಜಡೆ**
**ಎಷ್ಟುದ್ದ ಎಂದರೆ,**
**ಅವರು ಉರುಳು ಹಾಕಿಕೊಳ್ಳ ಬಯಸಿದರೆ**
**ಹಗ್ಗವೇ ಬೇಡ!**
**ಹುಡುಗರ ಎದೆಗಂತೂ ಉರುಳು ಹಾಕುತ್ತಾರೆ**
**ಎಂದು ಹೇಳುವುದೇ ಬೇಡ!**

(ಸಿಪಿಕೆ ಸಮಗ್ರ ಕವಿತೆ, ಪು. ೨೦೧)

ಮನಸ್ಸೆಂಬುದು ಮರ್ಕಟ ಇದ್ದಹಾಗೆ. ಆದ್ದರಿಂದ ಅದು ಹೇಗೆ ವರ್ತಿಸುತ್ತದೆ ಎಂಬುದನ್ನು ಸಿಪಿಕೆ ಯವರು ಹೇಳಿದ್ದಾರೆ.

**ಒಮ್ಮೊಮ್ಮೆ**

**ಬೋಳಾಗುತ್ತಿದೆ ನೆತ್ತಿ;**
**ಆದರೂ ಆಗಾಗ ಮನಸ್ಸು ಭಗ**
**ಭಗನೆ ಉರಿಯುವುದು**
**ಹೊತ್ತಿ!**

(ಸಿಪಿಕೆ ಸಮಗ್ರ ಕವಿತೆ, ಪು. ೨೦೧)

ಪುರುಷ ಮತ್ತು ಸ್ತ್ರೀಯರ ವ್ಯತ್ಯಾಸ ಈ ಕೆಳಕಂಡಂತೆ ಕಂಡುಬರುತ್ತದೆ.

**ವ್ಯತ್ಯಾಸ**

**ಈಗಿನ ಸ್ತ್ರೀಯರು ಪುರುಷರ**
**ಸಹಧರ್ಮಿಣಿಯರಲ್ಲ,**
**ಸಹಕರ್ಮಿಣಿಯರು**
**ಅರ್ಧಾಂಗಿಯರಲ್ಲ,**
**ಸ್ಪರ್ಧಾಂಗಿಯರು!** (ಸಿಪಿಕೆ ಸಮಗ್ರ ಕವಿತೆ, ಪು. ೨೦೩)

**ಅನುರಕ್ತ**

**ಚಲನಚಿತ್ರವೊಂದರಲ್ಲಿ**
**ಗಾಯಗೊಂಡ ಪ್ರೇಯಸಿಯ ಬೆರಳನ್ನು**
**ಪ್ರಿಯ ಚೀಪಿದ್ದನ್ನು ಕಂಡು**
**ನಾನಂದುಕೊಂಡೆ:**
**ಆ: ! ನಿಶ್ಚಿತವಾಗಿ ಈತ**
**ಅನುರಕ್ತ!** (ಸಿಪಿಕೆ ಸಮಗ್ರ ಕವಿತೆ, ಪು. ೨೦೩)

ಪ್ರೀತಿಸುವನ ಮನಸ್ಸು ಹೀಗಿರುತ್ತದೆಂಬುದನ್ನು ಈ ಮೇಲಿನ ಚುಟುಕು ತಿಳಿಸುತ್ತದೆ.

**ಸಾಂತ್ವನ**

**ಬದುಕು ಮರುಭೂಮಿಯಾಯಿತೆ**
**ಪೂರ?**
**ಚಿಂತೆಯಿಲ್ಲ**
**ಅಲ್ಲಿಯೇ ಬೆಳೆಯುವುದು ಕರ್ಜೂರ?** (ಸಿಪಿಕೆ ಸಮಗ್ರ ಕವಿತೆ, ಪು. ೨೦೪)

ಈ ರೀತಿಯ ಸಾಂತ್ವನ ಎಷ್ಟು ಹಾಸ್ಯಾಸ್ಪದವಾಗಿದೆ.

**ಉತ್ತರ**

**"ಯಾವಾಗಲೂ ಪರೀಕ್ಷೆಗಳಲ್ಲಿ**
**ಹುಡುಗಿಯರೇ ಏತಕ್ಕೆ ಮೇಲುಗೈ?"**
**"ಏತಕ್ಕೆಂದರೆ,**
**ಕಷ್ಟಪಟ್ಟು ಓದುತ್ತಾರೆ"**
**"ಹುಡುಗರೇನು ಮಾಡುತ್ತಾರೆ?"**
**"ಸದಾ ಹುಡುಗಿಯರನ್ನು ಓದುತ್ತ**
**ಕಾಲ ದೂಡುತ್ತಾರೆ!"** (ಸಿಪಿಕೆ ಸಮಗ್ರ ಕವಿತೆ, ಪು. ೨೦೭)

ಇದಕ್ಕೆಯೇ ಹುಡುಗಿಯರು ಮೇಲುಗೈ, ಹುಡುಗರದ್ದು ಕೆಳಗೈ ಆಗಿದೆ.

**ಭಾಗ್ಯ**

**ಅನ್ಯ ಭಾಷೆಗಳ ಜನ ತಮ್ಮ ಪ್ರೇಯಸಿಗರಿಗೆ**
**ಕಡಲಿನ ದುಬಾರಿ ಮುತ್ತುಗಳನ್ನು ಮಾತ್ರ**
**ಕೊಡಬಲ್ಲರು**
**ಕನ್ನಡಿಗರ ಭಾಗ್ಯವೇ ಭಾಗ್ಯ!**
**ಇವರು ಎಷ್ಟು ಮುತ್ತುಗಳನ್ನು ಬೇಕಾದರೂ**
**ಬಿಡಿಗಾಸಿನ ಖರ್ಚಿಲ್ಲದೆ**
**ಕೊಡಬಲ್ಲರು!** (ಸಿಪಿಕೆ ಸಮಗ್ರ ಕವಿತೆ, ಪು. ೨೧೯)

ಈ ಮುತ್ತುಗಳ ಭಾಗ್ಯ ಪುಕ್ಕಟೆಯಾಗಿಯೇ ದೊರೆಯುತ್ತಿರುತ್ತದೆ.

**ಯಶಸ್ವಿ**

**ನಮ್ಮಲ್ಲಿ ಕೆಲವರು ಅತಿಬುದ್ಧಿವಂತರ**
**ವಿಮರ್ಶೆಯನ್ನು ನೋಡಿದಾಗ**
**ನೆನಪಿಗೆ ಬರುತ್ತದೆ,**
**"ಶಸ್ತ್ರ ಚಿಕಿತ್ಸೆ ಯಶಸ್ವಿಯಾಯಿತು,**
**ಆದರೆ ರೋಗಿ ಸತ್ತ!"** (ಸಿಪಿಕೆ ಸಮಗ್ರ ಕವಿತೆ, ಪು. ೨೧೪)

ಎಂಬ ಮಾತು ಇದು ಕೂಡ ಯಶಸ್ವಿ ಚಿಕಿತ್ಸೆಯಾಗಿದೆ.

ಇಂದು ನಮ್ಮ ಸಮಾಜದಲ್ಲಿರುವ ಜನರು ವಿಚಿತ್ರದಲ್ಲಿನ ವಿಚಿತ್ರರಾಗಿರುತ್ತಾರೆ. ಏಕೆಂದರೆ ಜಿಪುಣ, ಶ್ರೀಮಂತನಾಗಿರುತ್ತಾನೆ. ಇವರಿಗೆ ಲಕ್ಷ್ಮೀ ಒಲಿಯುತ್ತಿರುತ್ತಾಳೆ.

**ವಿಚಿತ್ರ**

**ಯಾಕೊ ಕಾಣೆ:**
**ಸಿರಿ ಮತ್ತೆ ಮತ್ತೊಲಿಯುವುದು**
**ಜಿಪುಣರನ್ನೆ**
**ಸಂಗ್ರಹನಿಪುಣರನ್ನೇ!** (ಸಿಪಿಕೆ ಸಮಗ್ರ ಕವಿತೆ, ಪು. ೨೧೯)

ನಲ್ಲನ ಜೇಬಿನ ಖಾಲಿತನವನ್ನು ಹೇಗೆ ಈ ಚುಟುಕು ಬಿಂಬಿಸಿದೆ. ಇದುವೇ ಹಾಸ್ಯವಾಗಿದೆ.

**ದುಬಾರಿ**

**ಅತ್ಯಂತ ಸ್ವಾದು**
**ಆರೋಗ್ಯಕ್ಕೆ ಒಳ್ಳೆಯದೇ ಹೌದು,**

**ನಲ್ಲೆಯ ಗಲ್ಲದ ಸೇಬು**
**ಆದರೆ ಬರಿದೋ ಬರಿದು**
**ನಲ್ಲನ ಜೇಬು!** (ಸಿಪಿಕೆ ಸಮಗ್ರ ಕವಿತೆ, ಪು. ೩೩೯)

ಖುಶಿಯೆಂಬುದು ಹಾಸ್ಯದ ರೂಪದಲ್ಲಿ ವರ್ಣಿತವಾಗಿರುವುದನ್ನು ಈ ಕೆಳಗಿನ ಚುಟುಕು ಬಿಂಬಿಸುತ್ತದೆ.

**ಖುಶಿ**

**ಯಾವುದೋ ಊರಿನಲ್ಲಿ**
**ಸಾರಾಯಿ ಮಾರಾಟ ನಿಲ್ಲಿಸಿದರೆಂಬ**
**ಸುದ್ದಿಯನ್ನೋದಿ ನನಗೆ**
**ಬಿಯರ್ ಕುಡಿದಷ್ಟು ಖುಶಿಯಾಯಿತು!**

(ಸಿಪಿಕೆ ಸಮಗ್ರ ಕವಿತೆ, ಪು. ೩೩೪)

ತೂಕ

**ಏಳು ಮಲ್ಲಿಗೆ ತೂಕದ**
**ರಾಜಕುಮಾರಿಯರ ಕತೆಗಳನ್ನು**
**ಕೇಳಿದ್ದ ನಲ್ಲ**
**ತನ್ನ ನಲ್ಲೆಯನ್ನೆತ್ತಲು ಹೋಗಿ**
**ತತ್ತರಿಸಿದ,**
**ಎಪ್ಪತ್ತು ಕಿಲೋ ತೂಕಕ್ಕೆ!** (ಸಿಪಿಕೆ ಸಮಗ್ರ ಕವಿತೆ, ಪು. ೩೩೦)

ತೂಕದ ಹಾಸ್ಯವು ಹೀಗೆ ಮೂಡಿ ಬಂದಿದೆ.

ಪ್ರಸ್ತುತ ದಿನಗಳಲ್ಲಿ ಹುಡುಗಿಯರ ಉಡುಗೆ-ತೊಡುಗೆಗಳಲ್ಲಿ ಸಾಕಷ್ಟು ವಿಶಿಷ್ಟತೆಯನ್ನು ಕಾಣುತ್ತಿದ್ದೇವೆ. ಸಿಪಿಕೆ.ಯವರು ಇದನ್ನು ಇಲ್ಲಿ ವಿಡಂಬಿಸಿದ್ದಾರೆ.

**ಆಘಾತ**

**ತುಂಡು ಲಂಗ ತೊಟ್ಟವರಿಗೆ**
**ಏರುತ್ತದಂತೆ ಸಂಧಿವಾತ!**
**ಕಂಡವರಿಗೆ ಆಗುತ್ತದೆಯೆ**
**ಹೃದಯಾಘಾತ?** (ಸಿಪಿಕೆ ಸಮಗ್ರ ಕವಿತೆ, ಪು. ೩೨೯)

ಕಾಲ ಉತ್ತಮವಾಗಿದ್ದು, ಮನುಷ್ಯ ತನ್ನ ಏಕತಾನತೆಯನ್ನು ಕಾಪಾಡಿಕೊಳ್ಳುತ್ತಿಲ್ಲ. ಬದಲಿಗೆ ಕಾಲಕ್ಕೆ ತಕ್ಕಂತೆ ಆತ ಬದಲಾಗುತ್ತಿದ್ದಾನೆ.

**ವಿಪರ್ಯಾಸ**

**ಉತ್ತಮವಾಗುತ್ತಿದೆ ಕಾಲ;**
**ಕೆಡುತ್ತಿದ್ದಾನೆ ಮನುಷ್ಯ!**
**ಇದಕ್ಕಿಂತಲೂ ಉಂಟೆ**
**ದೊಡ್ಡ ವಿಪರ್ಯಾಸ?** (ಸಿಪಿಕೆ ಸಮಗ್ರ ಕವಿತೆ, ಪು. ೩೨೩)

ಪ್ರೀತಿಯಲ್ಲಿ ವಿರಸವುಂಟಾಗಿದೆ ಎಂದರೆ ಅಲ್ಲಿಗೆ ಮುಕ್ತಾಯವೆಂಬ ಅರ್ಥ ಇಂದು ಬರುತ್ತಿದೆ. ಆದ್ದರಿಂದಾಗಿ ವಿರಸವುಂಟಾದಾಗ ಮರಳಿ ಪಡೆಯುವುದು ಬೇಕಾದಷ್ಟಿರುತ್ತದೆ. ಅದೋ ಹೀಗಿದೆ.

**ಮರಳಿಸಿದ್ದು**

**ಪ್ರಿಯ, ಪ್ರೇಯಸಿಯರು**
**ವಿರಸದಿಂದ ಬೇರ್ಪಡುವಾಗ**
**ಅವನು ಹೇಳಿದನಂತೆ:**
**ನಾನು ಕೊಟ್ಟದ್ದನೆಲ್ಲ ಮರಳಿಸಿಬಿಡು!**
**ಅವಳು ಕೊಟ್ಟದ್ದು ತತ್‌ಕ್ಷಣಕ್ಕೆ**
**ಕೆಲವು ಮುತ್ತುಗಳು**
**ಮತ್ತು ಕೆಲಕಾಲದ ಬಳಿಕ**
**ಮುತ್ತಿನಂಥ ಒಂದು ಮಗು!** (ಸಿಪಿಕೆ ಸಮಗ್ರ ಕವಿತೆ, ಪು. ೩೨೧)

**"ಒನ್ಸ್‌ಮೋರ್"**

**ಗುಂಪಿನಲ್ಲಿ ಗಾಂಪ ನಿಂತಿದ್ದಾಗ,**
**ಯಾರೋ ಅವನ ಕಾಲು ತುಳಿದರು;**
**"ಅಯ್ಯಯ್ಯೋ!" ಎಂದು ಬೊಬ್ಬೆ ಹಾಕಿದ**
**ಕೀರವಾಣಿಯೊಂದು "ಸಾರಿ" ಎಂದಿತು;**
**"ನೀವಾ? ದಯವಿಟ್ಟು ಇನ್ನೊಮ್ಮೆ ತುಳಿಯಿರಿ**
**ಎಂದ!** (ಸಿಪಿಕೆ ಸಮಗ್ರ ಕವಿತೆ, ಪು. ೩೧೯)

ಹೀಗೆ ಇದು ಎಂತಹ ಕಾಲದ ಅಪಹಾಸ್ಯವಾಗಿದೆಯೆಂಬುದು ತಿಳಿಯುತ್ತದೆ.

**ಉತ್ತರ**

**"ಈಗೀಗ ನೀವು ಮನೆಯ ಕಡೆ**
**ಲಕ್ಷ್ಯವನ್ನೇ ಕೊಡುತ್ತಿಲ್ಲ;**

ಬೆಳಗ್ಗೆ ಹೋದರೆ ಸಂಜೆ ಬರುತ್ತೀರಿ!"
ಎಂದು ಆಕ್ಷೇಪಿಸಿದ ಮಡದಿಗೆ ನುಡಿದೆ:
"ಹಾಗಾದರೆ, ಇನ್ನು ಮೇಲೆ
ಸಂಜೆ ಹೋಗಿ ಬೆಳಗ್ಗೆ ಬರುತ್ತೇನೆ!" (ಸಿಪಿಕೆ ಸಮಗ್ರ ಕವಿತೆ, ಪು. ೩೧೬)

ಇಂತಹ ಪುರುಷರು ಈವತ್ತು ಇದ್ದಾರೆ. ಇಲ್ಲಿ ಏಕಪತ್ನಿ ವ್ರತಸ್ಥ ಶ್ರೀರಾಮ ಎಂಬ ಮಾತುಗಳು ಎತ್ತಹೋಯಿತು.

ಒತ್ತಡ

ಶಸ್ತ್ರಚಿಕಿತ್ಸೆಗೆ ಮುನ್ನ
ರಕ್ತದ ಏರೊತ್ತಡ ಪರೀಕ್ಷಿಸಲು ಬಂದ
ಚೆಲುವೆ ನರ್ಸ್‌ಗೆ ಹೇಳಿದೆ;
"ನನಗೆ ಬಿ.ಪಿ. ಇಲ್ಲ, ಮೇಡಂ;
ಈಗದು ಕಾಣಿಸಿಕೊಂಡರೆ,
ನೀವೇ ಹೊಣೆ!" (ಸಿಪಿಕೆ ಸಮಗ್ರ ಕವಿತೆ, ಪು. ೩೧೪)

ಪಾನ

ಮನಸ್ಸು ಮಾಡಿದರೆ ಬಿಡಬಹುದು
ಮದಿರಾಪಾನ;
ಆದರೆ ಬಿಡಬಹುದೆ
ಮದಿರಾಕ್ಷಿಯರ ಅಧರಪಾನ? (ಸಿಪಿಕೆ ಸಮಗ್ರ ಕವಿತೆ, ಪು. ೩೭೪)

ಇದೇ ಪಾನದ ಮದ ಕೂಡ ಆಗಿದೆ.

ಮರುಳು

ಯಾವುದು ಉಗಿಯಬೇಕಾದ
ಹೇಯವೂ ಅದಕ್ಕೆ ಮನುಷ್ಯ
ಮಿತಿಮೀರಿ ಮರುಳಾದಾಗ
ತಾನೆ ಉಗಿಸಿಕೊಳ್ಳುತ್ತಾನೆ!

(ಸಿಪಿಕೆ ಸಮಗ್ರ ಕವಿತೆ, ಪು. ೩೭೪)

ಇದು ಮನುಷ್ಯ ಮಾಡುವ ದಿನನಿತ್ಯದ ಕೆಲಸವಾಗಿದೆ. ಗೊರಕೆಯು ಹೇಗಿರುತ್ತದೆಂಬುದನ್ನು ಈ ಚುಟುಕುವಿನಲ್ಲಿ ತಿಳಿಸಿದ್ದಾರೆ.

ಇತರರಿಗೆ

ನಮ್ಮ ಬೆನ್ನು ನಮಗೆ
ಕಾಣುವುದಿಲ್ಲ;
ಹಾಗೆಯೆ, ನಮ್ಮ ಗೊರಕೆ
ನಮಗೆ ಕೇಳುವುದಿಲ್ಲ! (ಸಿಪಿಕೆ ಸಮಗ್ರ ಕವಿತೆ, ಪು. ೩೮೫)

ಜಾಗ

ಭಾರತದ ಜನಸಂಖ್ಯೆಯ ಬಗೆಗೆ ತಿಳಿದ
ಪಾಶ್ಚಾತ್ಯನೊಬ್ಬ ಉದ್ಗರಿಸಿದನಂತೆ;
"ಅಲ್ಲಿ ಜನ ನಿಂತುಕೊಳ್ಳುವುದಕ್ಕೂ
ಜಾಗವಿರುವಂತೆ ತೋರುವುದಿಲ್ಲ;
ಆದರೂ ಇನ್ನೂ ಮಕ್ಕಳಾಗುತ್ತಲೇ
ಇವೆ ಹೇಗೆ?" (ಸಿಪಿಕೆ ಸಮಗ್ರ ಕವಿತೆ, ಪು. ೩೭೫)

ನಮ್ಮ ಭಾರತದಲ್ಲಿ ಜನಸಂಖ್ಯಾ ಸ್ಫೋಟಕ್ಕೆ ಇದುವೇ ಕಾರಣವಾಗಿದೆಂಬುದನ್ನು ಈ ಮೇಲಿನ ಚುಟುಕು ತಿಳಿಸುತ್ತದೆ.

ನಮ್ಮ ದೇಶದಲ್ಲಿ ಪ್ರೀತಿಗೆ ಹೆಚ್ಚಿನ ಪ್ರಾಮುಖ್ಯತೆಯಿದ್ದು, ವಿವಿಧ ವಿನ್ಯಾಸವನ್ನು ಅದು ನಿಡುತ್ತದೆ. ಆದರೆ ಬೇರೆ ದೇಶಗಳಲ್ಲಿರುವ ಪ್ರೀತಿಯ ಕೊಡುಗೆ, ಅದರ ವಿನ್ಯಾಸ ಹೇಗಿದೆಂಬುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

ಪ್ರತಿಜ್ಞೆ

ಮದುವೆಯಾಗುವವರೆಗೂ ಪುರುಷರ ಸಂಗ
ಮಾಡುವುದಿಲ್ಲ ಎಂದು ಪ್ರಜ್ಞೆ ಮಾಡಿದ್ದಾರಂತೆ
ಅಮೆರಿಕದ ಅಸಂಖ್ಯ ಕನ್ಯೆಯರು!
ಭೇಷ್
ಆದರೆ ಆಮೇಲೆಯೆ ಮಾಡುತ್ತಾರೆಯೇ
ಒಬ್ಬೊಬ್ಬರೂ ಅನೇಕ ಪುರುಷರ ಸಂಗ? (ಸಿಪಿಕೆ ಸಮಗ್ರ ಕವಿತೆ, ಪು. ೩೯೭)

ಪ್ರೀತಿ

ಬದುಕಿನ ನಾವೆಗೆ
ಪ್ರೀತಿಯ ಹಾಯಿ;
ಅದಿಲ್ಲವೋ
'ಸಾಯಿ'! (ಸಿಪಿಕೆ ಸಮಗ್ರ ಕವಿತೆ, ಪು. ೪೧೬)

ಬದುಕಿನಲ್ಲಿ ಪ್ರೀತಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಗುತ್ತದೆ. ಅದನ್ನೇ ಈ ಮೇಲಿನ ಚುಟುಕು ತಿಳಿಸುತ್ತದೆ.

**ಕನಸು**

**ಹಲವರ ಕನಸಿನಲ್ಲೂ**
**ಮಡದಿಯೆ ಬರಬೇಕಾ?**
**ಬರಬಾರದೆ ಯಾವಳಾದರೂ**
**'ರೇಖಾ'?** (ಸಿಪಿಕೆ ಸಮಗ್ರ ಕವಿತೆ, ಪು. ೪೩೫)

ಹೀಗೆ ಕನಸಿನಲ್ಲಿಯೂ ಮಡದಿಗಿಂತ ಇತರರ ಕನಸು ಬರಬೇಕೆಂಬುದು ಮೂರ್ಖತನವೂ ಆಗಿದೆ.

**ಟೈಗರ್**

**"ಪೇಪರ್‌ಗಳಲ್ಲಿ ನಿಮ್ಮ**
**ಭಾಷಣ, ಫೋಟೋಗಳು"**
**ಎಂದರೊಬ್ಬರು**
**ನಾನು ಹೇಳಿದೆ**
**"ಹೌದು ನಾವು**
**ಪೇಪರ್ ಟೈಗರ್‌ಗಳು!** (ಆಲಿಕಲ್ಲು ಹನಿಗವನಗಳು, ಪು. ೭)

ಟೈಗರ್‌ನ ನಿಜರೂಪವೇ ಇದಾಗಿದೆ.

**ದೇವರು**

**ಯಾರ, ಯಾವುದರ**
**ಬಗೆಗೂ ಬೇಡ, ತಾತ್ಸಾರ;**
**ನಾಯಿ ಬಗೆಗೂ!**
**DOG ಎಂಬುದನ್ನು**
**ಹಿಂದೆ ಮುಂದೆ ಮಾಡಿ ನೋಡಿ!** (ಆಲಿಕಲ್ಲು ಹನಿಗವನಗಳು, ಪು. ೧೪)

ಇದೇ ದೇವರ ರೂಪದ ಹಾಸ್ಯವೂ ಕಂಡುಬರುತ್ತದೆ.

**ವಿಮರ್ಶೆ**

**ಕೆಲವು**
**ಸಂದರ್ಭಗಳಲ್ಲಿ**
**ಪುಸ್ತಕಗಳ**

**ಅತ್ಯುತ್ತಮ**

**ವಿಮರ್ಶಕ**

**ಗೆದ್ದಲು!** (ಆಲಿಕಲ್ಲು ಹನಿಗವನಗಳು, ಪು. ೩೨)

ಪುಸ್ತಕಗಳು ಸರಸ್ವತಿಯ ಪ್ರತೀಕದಂತಿದೆ. ಆದರೆ ಈ ದಿನ ಇಂತಹ ಪುಸ್ತಕಗಳ ವಿಮರ್ಶಕನಾಗಿ ಗೆದ್ದಲು ಪ್ರಮುಖ ಪಾತ್ರವಹಿಸುತ್ತಿದೆ.

**ಅಗ್ಗ-ಅಗ್ಗಳ**

**ಯಾವುದು**

**'ಅಗ್ಗ ಮತ್ತು ಅಗ್ಗಳ'**

**(Cheap and best)**

**ಗಾಳಿ, ಬೆಳಕು, ನೀರು!**

**(ಅದರಲ್ಲೂ ಗಾಳಿ)** (ಆಲಿಕಲ್ಲು ಹನಿಗವನಗಳು, ಪು. ೬೩)

ಇವೇ ಇವತ್ತು ಮನುಷ್ಯನ ಜೀವನದಲ್ಲಿ ಅಗ್ಗಳವಾಗಿದೆ

**ಸುದ್ದಿ**

**ಚಿತ್ರನಟಿಯರು**

**ಪ್ರೀತಿಸಿದರೆ ಸುದ್ದಿ;**

**ಮದುವೆಯಾದರೆ ಸುದ್ದಿ;**

**ಗರ್ಭ ಧರಿಸಿ,**

**ಹೆತ್ತರೆ ಮಹಾಸುದ್ದಿ!**

**(ಸತ್ತರೆ ಅಷ್ಟಾಗಿ ಸುದ್ದಿಯಲ್ಲ)** (ಆಲಿಕಲ್ಲು ಹನಿಗವನಗಳು, ಪು. ೬೯)

ಇದುವೇ ಹೆಣ್ಣಿನ ಜೀವನವಾಗಿದೆ. ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು. ಆದ್ದರಿಂದಾಗಿ ಪ್ರೀತಿಸಿದ ನಂತರ ವಿವಾಹವಾಗುವುದು ಒಳ್ಳೆಯದು.

ಹೀಗೆ ಡಾ. ಸಿಪಿಕೆಯವರು ಹಾಸ್ಯದ ನೆಲೆಯಲ್ಲಿ ವಿವಿಧ ಚುಟುಕುಗಳ ರಚನೆಯ ಮೂಲಕ, ವಿಡಂಬನೆ, ಹಾಸ್ಯವೆರಡನ್ನು ಚಿತ್ರಿಸಿದ್ದಾರೆ. ಆದ್ದರಿಂದಾಗಿ ಜೀವನದಲ್ಲಿ ಹಾಸ್ಯವು ಅತ್ಯಂತ ಅವಶ್ಯಕವಾಗಿ ಬೇಕಾಗಿದೆ. ಇದಲ್ಲದೆ ಜೀವನದ ಸಾರದಲ್ಲಿ ಒಂದಂಶವನ್ನು ಕಳೆದುಕೊಂಡ ಹಾಗೆಯೇ ಆಗುತ್ತದೆ.

**ಸಾವಿನ ನೆಲೆಯ ಚುಟುಕುಗಳು**

ಸಾವು ಎಂಬುದು ನಿಗೂಢವಾದದ್ದಾಗಿದೆ. ಯಾವಾಗ ಬರುತ್ತದೆ, ಹೇಗೆ ಬರುತ್ತದೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಇದು ನಮ್ಮ ಜೀವನವನ್ನೇ ಅಂತ್ಯಗೊಳಿಸುತ್ತದೆ.

ಹೀಗೆ ಈ ನೆಲೆಯಲ್ಲಿ ಡಾ.ಸಿಪಿಕೆಯವರು ಅಗಾಧವಾದಂತಹ ಚುಟುಕುಗಳನ್ನು ರಚಿಸಿ, ಮನುಷ್ಯನ ಜೀವನದಲ್ಲಿ ಸಾವು ಹೇಗೆ ವಿವಿಧ ಪಾತ್ರವನ್ನು ವಹಿಸುತ್ತದೆಂಬುದನ್ನು ತಿಳಿಸಿದ್ದಾರೆ. ಸಾವಿನ ವಿವಿಧ ವಿನ್ಯಾಸಗಳ ವಿಶ್ಲೇಷಣೆ ಈ ಕೆಳಗಿನಂತಿದೆ.

**ಕಿರಣ**

**ವಿಚಿತ್ರ:**
**ಸಾಯಬೇಕೆಂದು**
**ಸಂಕಲ್ಪಿಸಿದರೆ**
**ಎಂಥೆಂಥವೋ**
**ಆಶಾಕಿರಣಗಳು**
**ಅಡ್ಡಬರುತ್ತದೆ!** (ಕುಡಿ–ಕಿಡಿ, ಪು. ೩)

ಸಾವೆಂಬುದು ನಾವು ಬಯಸಿದಾಗ ಬರುವುದಿಲ್ಲ. ವಿವಿಧ ಆಸೆಗಳನ್ನು ಹೊಂದಿರುವ ಆಶಾಜೀವಿಯಾಗಿರುವ ಮನುಷ್ಯನಿಗೆ ಇಂತಹ ವಿವಿಧ ಕಿರಣಗಳು ಅಡ್ಡಬಂದು ಸಾವನ್ನು ತಪ್ಪಿಸುತ್ತಾ ಹೋಗುತ್ತದೆ. ಮನುಷ್ಯನ ಜೀವನವೇ ಹಾಗೆ ಕನಸೊಂದು ಕಂಡರೆ ನನಸೊಂದು ಮತ್ತೊಂದಾಗುತ್ತದೆ. ಇದರಿಂದಾಗಿ ಮನುಷ್ಯ ಆಶಾಜೀವಿಯಾಗಿದ್ದಾಗ ಆತ ಸಾವಿನ ಬಗ್ಗೆ ಚಿಂತೆ ಮಾಡುವುದಿಲ್ಲ.

ಸಾವು ಹೇಗೆ ಬೇಕಾದರು ಬಂದು ಬಡಿಯಲಿ ಆದರೆ ಪಂಚಭೂತಗಳಲ್ಲಿ ಒಂದಾದಂತಹ ಬೆಂಕಿಯ ಸಹವಾಸ ಬೇಡವೆಂದು ಕೆಳಗಿನ ಚುಟುಕು ತಿಳಿಸುತ್ತದೆ.

**ಭಯಂಕರ**

**ಸಾಯಬಯಸುವವರು**
**ಎಂತಾದರೂ ಸಾಯಲಿ**
**ಆದರೆ ಬೆಂಕಿಯ ತಂಟೆ**
**ಮಾತ್ರ ಬೇಡ!**
**(ಪಂಚಭೂತ ಭಯಂಕರ, ಅಗ್ನಿ)**

(ಕುಡಿ–ಕಿಡಿ, ಪು. ೧೧)

ಹೌದು ಅಜ್ಞಾನವೇ ಜ್ಞಾನಕ್ಕಿಂತ ಉತ್ತಮ ಎಂದು ಹೇಳಿದರೆ ತಪ್ಪಾಗಲಾರದು. ಕೆಲವು ಅಂಶಗಳು ಸಾವಿಗಿಂತಲು ಕಡೆಯಾಗಿರುತ್ತದೆ.

ಕೆಲವರು ವ್ಯಕ್ತಿಯನ್ನು ಸಾಯಿಸಿ ಅದರ ಮೇಲೆ ಸೌಧವನ್ನು ಕಟ್ಟಿಕೊಳ್ಳುತ್ತಿದ್ದಾರೆ. ಅದನ್ನು ಸಿಪಿಕೆ ತುಂಬಾ ಚೆನ್ನಾಗಿ ತಿಳಿಸಿದ್ದಾರೆ.

ಬಂಡವಾಳ

ಕೆಲವರ ಸಾವು
ಕೆಲವರ ಏಳಿಗೆಯ
ಬಂಡವಾಳವಾಗುವುದು
ವಿಚಿತ್ರ!

(ಕುಡಿ–ಕಿಡಿ, ಪು. ೨೯)

ಭಾರತದಲ್ಲಿ ಸಾವಿಗೆ ಅದರದೇ ಆದಂತಹ ಬೆಲೆಯೆಂಬುದಿದೆ. ಸಾವು ಎಂದರೆ ಸತ್ತವರು ದೈವದ ಸಮಾನ ಎಂದು ಹೇಳುತ್ತಾರೆ. ರುದ್ರ ಭೂಮಿಯನ್ನು ದೇವಲಯವೆಂದು ಪೂಜಿಸುತ್ತಾರೆ. ಆದ್ದರಿಂದ ಭಾರತೀಯರ ದೃಷ್ಟಿ ವಿಶಿಷ್ಟವಾದುದಾಗಿದೆ.

ದೃಷ್ಟಿ

ಭಾರತೀಯರ ದೃಷ್ಟಿಗೆ
ಸಾವು ಸಾವಲ್ಲ
ಶಿವೈಕ್ಯ;
ಸ್ಮಶಾನ ಸ್ಮಶಾನವಲ್ಲ,
ರುದ್ರಭೂಮಿ!

(ಕುಡಿ–ಕಿಡಿ, ಪು. ೨೯)

ನಮ್ಮ ಭಾರತದಲ್ಲಿ ಸಾವನ್ನಪ್ಪಿದವರನ್ನು ದೇವರೆಂದು ಪೂಜಿಸುವುದಲ್ಲದೆ ಶಿವನಲ್ಲಿ ಐಕ್ಯರಾಗುತ್ತಾರೆ ಎಂದು ಹೇಳುತ್ತಾರೆ. ಎಂತಹ ಅಚಲವಾದ ನಂಬಿಕೆ ಇದೆ ಎಂದು ಹೇಳಬಹುದಾಗಿದೆ.

ಐಕ್ಯ

ಸತ್ತಾಗ ಕೆಲವರು
ಶಿವೈಕ್ಯರಾಗುತ್ತಾರೆ;
ಇನ್ನು ಕೆಲವರು
ಜಿನೈಕ್ಯರಾಗುತ್ತಾರೆ
ಇತ್ಯಾದಿ ಇತ್ಯಾದಿ!
ನಾಸ್ತಿಕರೊ
ಅವರಿಗೆ ಐಕ್ಯ ನಾಸ್ತಿ!

(ಕುಡಿ–ಕಿಡಿ, ಪು. ೪೩)

ಅನಿವಾರ್ಯ

ಹುಟ್ಟಿಗೆ ಸಾವು
ತಪ್ಪದು;
ಅದನ್ನು ಆರಂಭದಿಂದಲೇ
ಪಟ್ಟಾಗಿ ಹಿಡಿದುಕೊಂಡಿರುತ್ತದೆ! (ಕುಡಿ–ಕಿಡಿ, ಪು. ೧೮)

ಹುಟ್ಟು ಹೇಗೆ ನಮಗೆ ಸಹಜವಾಗಿ ಬರುತ್ತದೆಯೋ ಹಾಗೆಯೇ ಸಾವು ಸಹ ಅದರೊಂದಿಗೆ ಬರುತ್ತದೆ. ಆದ್ದರಿಂದಾಗಿ ಹುಟ್ಟಿನ ಜೊತೆಗೆ ಸಾವು ಅನಿವಾರ್ಯವಾಗಿದೆ.

ಕಷ್ಟ

ಬದುಕುವುದಿರಲಿ
ಸಾಯುವುದೂ ಕಷ್ಟ
ಎನ್ನುವಂಥ ಅವಸ್ಥೆಯನ್ನು
ತಂದುಕೊಳ್ಳಬಾರದು! (ಕುಡಿ–ಕಿಡಿ, ಪು. ೨೦)

ಬದುಕೆಂಬುದು ದೊಡ್ಡ ಸಾಗರ, ಈ ಸಾಗರದಲ್ಲಿ ಬರುವಂತಹ ಅಬ್ಬರದ ಅಲೆಗಳನ್ನು ಎದುರಿಸಿ ದೊಡ್ಡ ಹಡಗೆಂಬ ಜೀವನವನ್ನು ನಡೆಸಬೇಕು. ಆದರೆ ಸಾಯುವುದಕ್ಕೂ ಕಷ್ಟ ಎಂಬ ಕಲ್ಪನೆ ಯಾವುದೇ ಕಾರಣಕ್ಕೂ ನಮ್ಮ ಮನಸ್ಸಿನಲ್ಲಿ ಬರಬಾರದು.

ಕಡೆ

ಸಾವು ಕಡೆ;
ಅದರ ಬಗೆಗೆ
ಕಡೆಯ ಮಾತು
ಹೇಳಬಹುದು;
ಆದರೆ ಬದುಕಿನ ಬಗೆಗೆ
ಹೇಳಲಾಗದು! (ಕುಡಿ–ಕಿಡಿ, ಪು. ೨೨)

ಬದುಕು ಯಾವಾಗ ಕೊನೆಯಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಸಾವು ಅಂತ್ಯವಾದುದರಿಂದ ಅದರ ಬಗ್ಗೆ ಹೇಳಬಹುದಾಗಿದೆ.

ಸಾವು

ಅಜ್ಞಾನ ಸಾವಲ್ಲ;
ಆದರೆ
ಕೆಲವಂಶಗಳು

**ಗೊತ್ತಾದಾಗ**

**ನಾವು ಸತ್ತ ಹಾಗೆ!** (ಕುಡಿ–ಕಿಡಿ, ಪು. ೨೩)

ಇದ್ದಾಗ ಕಣ್ಣುರಿ ಹೋದಾಗ ಹೊಟ್ಟುರಿ' ಎಂಬಂತೆ ಬದುಕಿದ್ದಾಗ ಜನರು ಆತನನ್ನು ಹೊಗಳುವುದಿಲ್ಲ, ಸತ್ತಾಗ ಹೊಗುಳುತ್ತಾರೆ. ಅದರಿಂದ ಏನು ಪ್ರಯೋಜನ ಎಂಬ ಪ್ರಶ್ನೆ ತಲೆ ತಲೆಮಾರುಗಳಿಂದಲೂ ಪ್ರಶ್ನಾತೀತವಾಗಿಯೇ ಉಳಿದಿದೆ. ಸಿಪಿಕೆ ಅವರು ಇದನ್ನು ಅತ್ಯುತ್ತಮವಾಗಿ ತಿಳಿಸಿದ್ದಾರೆ.

**ಹೊಗಳಿಕೆ**

**ಸತ್ತ ಮೇಲೆ ಆಡುವ**

**ಹೊಗಳು ಮಾತುಗಳನ್ನು**

**ಬದುಕಿರುವಾಗಲೇ**

**ಆಡಿದರೆ**

**ಕೊಳ್ಳಹೊಗುವುದೇನು!** (ಕುಡಿ–ಕಿಡಿ, ಪು. ೪೪)

ಬದುಕಿನ ಬಗ್ಗೆ ಆತ್ಮವಿಶ್ವಾಸವಿಲ್ಲದ ಎಲ್ಲರ ಜೀವನದಲ್ಲಿಯೂ ಇದು ಸಹಜವಾಗಿ ಮೇಳಯಸಿರುತ್ತದೆ.

**ಮೇಳ**

**ಕೆಲವರ ಬದುಕಿನಲ್ಲಿ**

**ಆತ್ಮಹತ್ಯೆ, ಕೊಲೆ,**

**ಸಹಜ ಸಾವು – ಎಲ್ಲ**

**ಮೇಳವಿಸಿರುತ್ತದೆ!** (ಕುಡಿ–ಕಿಡಿ, ಪು. ೫೦)

ಬದುಕು ಮತ್ತು ಸಾವುಗಳು ಒಂದೇ ನಾಣ್ಯದ ಎರಡು ಮುಖಗಳು ಇದ್ದ ಹಾಗೆ. ಇವೆರಡೂ ಅನ್ಯೋನ್ಯವಾಗಿರುತ್ತದೆ.

**ಬದುಕು –ಸಾವು**

**ಬದುಕು ವಿಕೃತ**

**ಸಾವು ಸುಂದರ,**

**ಬದುಕು ಭಯಂಕರ**

**ಎನಿಸುವಂಥ**

**ಪ್ರಕರಣಗಳಿರುತ್ತವೆ!** (ಕುಡಿ–ಕಿಡಿ, ಪು. ೫೨)

ಸಾವು ಬಂದ ಮೇಲೆ ಮತ್ತೆ ಜೀವಂತವಾಗಿ ಮನುಷ್ಯನನ್ನು ಪಡೆಯಲು ಸಾಧ್ಯವಿಲ್ಲ. ಹಾಗಾಗಿ ಅಳುತ್ತಾ ಗೋಳಾಡುವುದು ಅನಗತ್ಯವಾಗಿದೆಂಬುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಅನಗತ್ಯ**

**ಜಗತ್ತಿನಲ್ಲಿ**
**ಸತ್ತವರಿಗೆ**
**ಅತ್ತು ಕರೆಯುವ**
**ಅಗತ್ಯವುಂಟೆ? ಇಲ್ಲಿ**
**ಯಾರು ತಾನೆ ನಿತ್ಯರು?** (ಕುಡಿ–ಕಿಡಿ, ಪು. ೫೪)

ಆದಿ–ಅಂತ್ಯಗಳ ನಡುವಿನಲ್ಲಿ ಅಂತ್ಯವೇ ಆದಿಯಾಗಿರುತ್ತದೆ ಎಂಬುದನ್ನು ಸಿಪಿಕೆಯವರು ಅದ್ಭುತವಾಗಿ ತಿಳಿಸಿದ್ದಾರೆ.

**ಆದಿ**

**ಅಂತ್ಯ ಎಂದೇಕೆ**
**ಅಲಕ್ಷ್ಯ?**
**ಒಂದು ರೀತಿಯಲ್ಲಿ**
**ಅದೇ ಆದಿಯಲ್ಲವೆ?**
**ಕಡೆಯ ಮುಡಿ!** (ಕುಡಿ–ಕಿಡಿ, ಪು. ೫೭)

ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬ ಮನುಷ್ಯನಿಗೂ ಸಾವು ಕಟ್ಟಿಟ್ಟಬುತ್ತಿ. ಆದ್ದರಿಂದ ದೇವ ಮಾನವರಾದರು ಸಾವು ಹಿಂಬಲಿಸುತ್ತಿರುತ್ತದೆ.

**ಪವಾಡ**

**ಪವಾಡ ಪುರುಷರು**
**ಸಾಯುತ್ತಾರೆಯೇ?**
**ಖಂಡಿತ**
**ಆದರೆ ಅವರ ಸಾವೂ**
**ಒಂದು ಪವಾಡ!** (ಕುಡಿ–ಕಿಡಿ, ಪು. ೬೧)

ಸಾವಿಗೆ ಸಾವಿರ ಕಾರಣಗಳಿರಬಹುದು. ಆದರೆ ಬದುಕಲು ಮತ್ತು ಬದುಕನ್ನು ನಡೆಸಲು ಒಂದು ಕಾರಣ ಸಾಕು ಎಂಬುದನ್ನು ಅದ್ಭುತವಾಗಿ ತಿಳಿಸಿದ್ದಾರೆ.

**ಕಾರಣ**

**ಸಾವಿಗೆ**
**ಸಾವಿರ**
**ಕಾರಣಗಳಿರಬಹುದು;**
**ಬದುಕಿಗೆ**
**ಒಂದು ಕಾರಣವಿದ್ದರೂ**
**ಬದುಕಬಹುದು!** (ಕುಡಿ–ಕಿಡಿ, ಪು. ೬೨)

**ಅರ್ಹತೆ**

**ಆತ್ಮಹತ್ಯೆಗೂ**
**ಅರ್ಹತೆ ಬೇಕು;**
**ಕ್ಷುಲ್ಲಕ ಕಾರಣಕ್ಕಾಗಿ**
**ಸಲ್ಲದು!** (ಕುಡಿ–ಕಿಡಿ, ಪು. ೬೯)

ಇಂದು ಯಾವುದೇ ಹುದ್ದೆಗೆ ಆಯ್ಕೆಯಾಗಲು ಹುದ್ದೆಗೆ ತಕ್ಕಂತೆ ಅರ್ಹತೆ ಬೇಕು. ಅದರಂತೆ ಸಿಪಿಕೆ ಅವರು ಕ್ಷುಲ್ಲಕ ಕಾರಣಕ್ಕಾಗಿ ಸಾವನಪ್ಪುವುದು ಉತ್ತಮವಲ್ಲ ಆತ್ಮಹತ್ಯೆಗೆ ಅರ್ಹತೆ ಬೇಕೆಂದು ಹೇಳಿದ್ದಾರೆ.

ಹುಟ್ಟು ಎಲ್ಲರಿಗೂ ಒಂದೇ ಆಗಿದ್ದರೆ ಸಾವು ವಿವಿಧ ಬಗೆಯಲ್ಲಿ ಅವರಿಗೆ ತಕ್ಕ ಹಾಗೆ ಬರುತ್ತದೆಂಬುದನ್ನು ಸಿಪಿಕೆ ಉತ್ತಮವಾಗಿ ಹೇಳಿದ್ದಾರೆ.

**ಹುಟ್ಟು–ಸಾವು**

**ಎಲ್ಲರ ಹುಟ್ಟು**
**ಒಂದೇ ರೀತಿಯಲ್ಲಿ;**
**ಆದರೆ ಪ್ರತಿಯೊಬ್ಬರ**
**ಸಾವಿನ ಬಗೆ**
**ಅವರದೇ!** (ಕುಡಿ–ಕಿಡಿ, ಪು. ೭೩)

**ಸೋಜಿಗೆ**

**ಹರಯವನ್ನೊಡೆದು**
**ಮೂಡುವ**
**ಮುಪ್ಪು**
**ಸಾವಿಗಿಂತ**
**ಸೋಜಿಗ!** (ಕುಡಿ–ಕಿಡಿ, ಪು. ೭೬)

ಮುಪ್ಪು ಸಾವಿಗಿಂತಲೂ ಆಶ್ಚರ್ಯ ಚಕಿತವಾಗಿರುತ್ತದೆಂದು ಹೇಳಿರುವುದು ಸಮಂಜಸವಾದುದಾಗಿದೆ. ಆದಿರಿಂದಲೇ ಮುಪ್ಪಿನಲ್ಲಿ ಅನುಭವಿಸುವ ಯಾತನೆ ಯಾವ ಶತ್ರುವಿಗೂ ಬೇಡವೆಂದು ಭಾವಿಸಲಾಗುತ್ತದೆ.

**ಸಾವು**

**ಅನೇಕರು**
**ಅನವರತ**
**ಅನಧಿಕೃತವಾಗಿ ಸತ್ತು**
**ಕಡೆಗೊಮ್ಮೆ**
**ಅಧಿಕೃತವಾಗಿ**
**ಸಾಯುತ್ತಾರೆ!** (ಕುಡಿ–ಕಿಡಿ, ಪು. ೧೦೨)

ಕೆಲವು ಸಂದರ್ಭಗಳಲ್ಲಿ ಜನರು ಸಾವನ್ನು ಅಧಿಕೃತವಾಗಿಯೂ ಸ್ವೀಕರಿಸುತ್ತಾರೆಂದು ಈ ಮೇಲಿನ ಚುಟುಕು ತಿಳಿಸುತ್ತದೆ.

**ವ್ಯತ್ಯಾಸ**

**ಜೀವನ ಸಂಕೀರ್ಣ,**
**ಅಪೂರ್ವ;**
**ಸಾವು ಸರಳ**
**ಪೂರ್ಣ!** (ಕುಡಿ–ಕಿಡಿ, ಪು. ೧೦೨)

ಜೀವನ ತುಂಬಾ ದೀರ್ಘವಾದುದಾಗಿದೆ. ಆದರೆ ಅಪೂರ್ಣತೆಯಿಂದ ಕೂಡಿದೆ. ಸಾವು ಕ್ಷಣಿಕ ಆದರೆ ಪೂರ್ಣತೆಯನ್ನು ಹೊಂದಿದೆ.

**ಸಾವು**

**'ಹುಟ್ಟಿದವರಿಗೆ**
**ಸಾವು ತಪ್ಪದು'**
**ಅಷ್ಟೇಕೆ**
**ಹೊಟ್ಟೆಯಲ್ಲೇ ಸಂಭವಿಸದೆ,**
**ಎಷ್ಟೋ ಸಲ?** (ಕುಡಿ–ಕಿಡಿ, ಪು. ೧೦೭)

ಹುಟ್ಟಿದಂತಹ ಮನುಷ್ಯನಿಗೆ ಮಾತ್ರವಲ್ಲ ಭ್ರೂಣದಲ್ಲಿರುವ ಮಗುವಿಗೂ ಸಹ ಸಾವು ಎಂಬುದು ಬರದೆ ಇರದು ಎಂದು ವರ್ಣಿಸಿರುವುದು ಉತ್ತಮವಾದುದಾಗಿದೆ.

**ಕಷ್ಟ**

**ಬದುಕಿನಲ್ಲಿ**
**ಎಲ್ಲವೂ ಕಷ್ಟ!**
**ಸಾವು ಸುಲಭವೇ?**
**ಎಲ್ಲಕ್ಕಿಂತ ಕಷ್ಟ!** (ಕುಡಿ-ಕಿಡಿ, ಪು. ೧೧೨)

ಜೀವನದಲ್ಲಿ ಎಲ್ಲಕ್ಕಿಂತಲೂ ಕಷ್ಟವಾಗಿದೆ ಸಾವೆಂಬುದು, ಕಷ್ಟಗಳ ಪ್ರತೀಕದಂತೆ ಸಾವು ಇರುತ್ತದೆ.

ಸಾವು-ಬದುಕು ಇವೆರಡನ್ನೂ ಧೈರ್ಯದಿಂದ ಸ್ವೀಕರಿಸಬೇಕಾಗಿದೆ.

**ಅಭಿನ್ನ**

**"ಬದುಕಲು ಕಲಿಯಿರಿ"**
**"ಸಾಯಲು ಕಲಿಯಿರಿ"**
**ಎರಡೂ (ಹೆಚ್ಚು ಕಡಿಮೆ)**
**ಒಂದೇ ಅರ್ಥದ**
**ಹೇಳಿಕೆಗಳು!** (ಕುಡಿ-ಕಿಡಿ, ಪು. ೧೨೮)

ಸಾವೆಂಬುದು ಸಕಲ ಪ್ರತಿಭೆಗಳನ್ನು ಹೊಂದಿದೆ ಎಂಬುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಸಾವು**

**ಇದಕ್ಕಿಂತ ದೊಡ್ಡ**
**ಸತ್ಯವುಂಟೇ?**
**ವರವೂ ಹೌದು,**
**ಶಾಪವೂ ಹೌದು'**
**ರಕ್ಷೆಯೂ ಹೌದು;**
**ಶಿಕ್ಷೆಯೂ ಹೌದು;**
**ಸಾವು!** (ಕುಡಿ-ಕಿಡಿ, ಪು. ೧೨೯)

ಸಾವೆಂಬುದು ನಮ್ಮ ದೇಹದ ಅಂಗಗಳಂತೆ ಅಷ್ಟೇ ಪ್ರಾಮುಖ್ಯತೆಯನ್ನು ಗಳಿಸಿಕೊಂಡಿದೆ. ಸಾವು ಯಾವಾಗ ಬೇಕಾದರೂ ಬರಬಹುದು ಆದ್ದರಿಂದ ಸಂಚಾರಿಯಾಗಿ ಬದುಕುತ್ತಿದೇವೆ.

**ಸಂಚಾರಿ**

**ಸಾವಿನ ಯೋಚನೆಯನ್ನು**

**ಸ್ಥಾಯಿಯಾಗಿಟ್ಟುಕೊಂಡು**

**ಸಂಚಾರಿಯಾಗಿ**

**ಬದುಕುತ್ತಿದ್ದೇವೆ!** (ಕುಡಿ–ಕಿಡಿ, ಪು. ೧೩೧)

ಸಾಯುವುದು ದೊಡ್ಡ ಕೆಲಸವಲ್ಲ, ಒಳ್ಳೆಯ ಹೆಸರನ್ನು ಪಡೆದುಕೊಂಡು ಸಾವನ್ನಪ್ಪುವುದು, ನಿಜವಾದಂತಹ ಸಾವು ಎಂದು ಹೇಳಬಹುದಾಗಿದೆ. ಅಲ್ಲದೆ ಅಂತಹ ಸಾವು ಆದರ್ಶವಾಗಿರಬೇಕೆಂದು ಸಿಪಿಕೆ ತಿಳಿಸಿದ್ದಾರೆ.

**ಆದರ್ಶ**

**ಬದುಕಿಯೂ ಸತ್ತವರು**

**ಬಹಳ;**

**ಎಲ್ಲೋ ಬದುಕಿರುತ್ತಾರೆ;**

**ಅಂಥ ಅವಸ್ಥೆ**

**ನಮಗೆ ಆದರ್ಶವಾಗಲಿ** (ಕುಡಿ–ಕಿಡಿ, ಪು. ೧೩೬)

ಆತ್ಮಹತ್ಯೆಯಿಂದ ಪಾರಾಗುವುದು ಉತ್ತಮ, ಏಕೆಂದರೆ ಆತ್ಮಹತ್ಯೆ ಮಾಡಿಕೊಳ್ಳುವ ಘೋರ ಪಾಪ ಮತ್ತೊಂದಿಲ್ಲ. ಈ ಕೆಳಗಿನ ಚುಟುಕು ಇದನ್ನು ತಿಳಿಸುತ್ತದೆ.

**ಪಾರು**

**ಯಾವುದು ದೊಡ್ಡದು?**

**ಸಾವಿನಿಂದ, ಕೊಲೆಯಿಂದ**

**ಪಾರಾಗುವುದಲ್ಲ;**

**ಅತ್ಮಹತ್ಯೆಯಿಂದ**

**ಪಾರಾಗುವುದು!** (ಕುಡಿ–ಕಿಡಿ, ಪು. ೧೩೬)

ಸಾವನ್ನು ಎದುರಿಸುತ್ತಿರುವ ಎಷ್ಟೋ ಮಂದಿ ಇದ್ದಾರೆ. ಇನ್ನು ಕೆಲವರು ಸಾವು ಎಂದರೆ ಭಯಪಡುತ್ತಾರೆ. ಆದರೆ ಕೆಲವರು ಸಾವಿನ ದವಡೆಯಲ್ಲಿದ್ದರು ನಿರಾಳರಾಗಿತ್ತಾರೆ. ಹೀಗೆ ಸಾವು ಎಂಬುದು ಇಷೆಲ್ಲಾ ಅಂಶಗಳನ್ನು ಪ್ರತಿನಿಧಿಸಿರುತ್ತದೆ.

**ನಿರಾಳ**

**ಕೆಲವರು**

**ಸಾವಿನ ಗಡಿಯಲ್ಲಿ**

ಬದುಕುತ್ತಿರುತ್ತಾರೆ,
ಭಯಭೀತರಾಗಿ;
ಮತ್ತೆ ಕೆಲವರು
ಅದರ ನಡುವೆಯೆ
ನಿರಾಳವಾಗಿ! (ಕುಡಿ–ಕಿಡಿ, ಪು. ೧೩೮)

ಸಾವಿನ ಪಂಜರತೆಯನ್ನು ಸಿಪಿಕೆ ಈ ಕೆಳಗಿನಂತೆ ತಿಳಿಸಿದ್ದಾರೆ.

**ಪಂಜರ**

ಸಾವು ಕೆಲವೊಮ್ಮೆ
ವಿಷಾದಕರ;
ಕೆಲವೊಮ್ಮೆ
ಶರಣಾಗತ
ವಜ್ರಪಂಜರ! (ಅಹನ್ಯ ಹನಿ, ಪು. ೧)

**ಜೀವನ**

ಇನ್ನೂ ಸ್ಪಷ್ಟವಾಗಿ
ಹೇಳಿಬಿಡೋಣ
ಇದ್ದುದೆಲ್ಲವ ಬಿಟ್ಟು
ಕಡೆಗೊಮ್ಮೆ ಮಡಿಯುವುದೆ
ಜೀವನ! (ಅಹನ್ಯ ಹನಿ, ಪು. ೪)

ಇದೇ ಮೂರಕ್ಷರದ ಜೀವನವಾಗಿದೆ. ಸಾವಿನೊಡನೆ ಜೀವನದ ಅಂತ್ಯವನ್ನು ಕಾಣಲಾಗುತ್ತದೆ.

**ಮದ್ದು**

'ಮದ್ದುಂಟೆ ಜನನ ಮರಣಕ್ಕೆ?
ಎಂಬುದು ಪ್ರಾಚೀನ ಪ್ರಶ್ನೆ
ಈಗ ಮದ್ದುಂಟು ಜನನಕ್ಕೆ
ಮರಣಕ್ಕಿಲ್ಲ! (ಅಹನ್ಯ ಹನಿ, ಪು. ೩೯)

ಇಂದು ಜನನಕ್ಕೆ ಮದ್ದಿದೆ. ಆದರೆ ಮರಣಕ್ಕೆ ಮದ್ದಿಲ್ಲ, ಇವೆರಡಕ್ಕೂ ಜೀವಕೊಡುವುದು ಶಿವನ ಕೈಯಲ್ಲಿದೆ.

ಯಾವ ಪ್ರಶ್ನೆಗಳಿಂದಲೂ ಯಾವುದೇ ರೀತಿಯ ಸುಖ ದೊರೆಯುವುದಿಲ್ಲ. ಆದರೆ ಒಂದೇ ಒಂದು ಪ್ರಶಸ್ತಿ ಬೇಕೆಂದು ಕೇಳಿಕೊಂಡಿರುವುದು ಸೂಕ್ತವಾದುದಾಗಿದೆ.

ಪ್ರಶಸ್ತಿ

ಬೇಡ ಮರಣಪೂರ್ವ
ಪ್ರಶಸ್ತಿ
ಬೇಡ ಮರಣೋತ್ತರ
ಪ್ರಶಸ್ತಿ
ಸಾಕು ನೋವು ನರಳಿಲ್ಲದೆ
ಮರಣ ಪ್ರಶಸ್ತಿ! (ಅಹನ್ಯ ಹನಿ, ಪು. ೪೩)

ಜೀವನದಲ್ಲಿ ಮನುಷ್ಯ ಆಶಾದಾಯಕನಾಗಿರುತ್ತಾನೆಂಬುದಕ್ಕೆ ಈ ಚುಟುಕು ನಿದರ್ಶನವಾಗಿದೆ.

ಅನಿವಾರ್ಯ

ಸಾವು ನಿಶ್ಚಿತ
ಆದರೂ
ಚಿರಂಜೀವಿಗಳಂತೆ
ಬದುಕುವುದು ಅನಿವಾರ್ಯ! (ಅಹನ್ಯ ಹನಿ, ಪು. ೪೭)

ಪಾಠಗಳನ್ನು ಜೀವನದುದ್ದಕ್ಕೂ ಕಲಿಯುತ್ತ ಹೋಗುತ್ತೇವೆಂಬುದನ್ನು ಸಾವಿನ ಬಾಗಿಲಲ್ಲಿ ನಿಂತಾಗಲೂ ಕಲಿಯುತ್ತೇನೆಂಬುದನ್ನು ತಿಳಿಸಲಾಗಿದೆ.

ಪಾಠ

ಬದುಕಿರುವಾಗ
ಮಾತ್ರವಲ್ಲ
ಸಾಯುವ ಗಳಿಗೆಯಲ್ಲೂ
ಕಲಿಯಬೇಕಾದ
ಪಾಠಗಳಿರುತ್ತವೆ! (ಅಹನ್ಯ ಹನಿ, ಪು. ೭೧)

ಕಾಯುವಿಕೆ ಜೀವನದ ಪ್ರಾರಂಭದಿಂದ ಅಂತ್ಯದವರೆಗೂ ನಿರಂತರವಾಗಿ ನಡೆಯುತ್ತಾ ಹೋಗುತ್ತದೆ. ಈ ಕೆಳಗಿನ ಚುಟುಕು ಕಾಯುವಿಕೆಯನ್ನು ಈ ರೀತಿಯಲ್ಲಿ ತಿಳಿಸಿದೆ.

ಕಾಯುವಿಕೆ

ಎಲ್ಲಕ್ಕೂ ಕಾಯುವುದು, ಕಾಯುವುದು
ಇದೇ ದಿನನಿತ್ಯದ ಬವಣೆ
ಹಾಗೆ ನೋಡಿದರೆ
ಕಾಯುವುದೇ ಬದುಕು;

**ಅರಿವಿಲ್ಲದೆ ಎಲ್ಲರೂ ಕಾಯುತ್ತಿದ್ದೇವೆ**
**ಸಾವಿಗಾಗಿ, ಉದ್ದಕ್ಕೂ!** (ಸಿಪಿಕೆ ಸಮಗ್ರ ಕವಿತೆ, ಪು. ೨೧೦)

ಮನುಷ್ಯನು ತಾನು ಪ್ರೀತಿಸುವ ವಸ್ತುವಿನಿಂದ ಸಾವನ್ನಪ್ಪುವುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಕೊಲೆ**

**ಪ್ರತಿಯೊಬ್ಬ ವ್ಯಕ್ತಿಯೂ**
**ತಾನೂ ಪ್ರೀತಿಸುವ**
**ವಸ್ತುವಿನಿಂದ**
**ಕೊಲ್ಲಲ್ಪಡುತ್ತಾನೆ!** (ಸಿಪಿಕೆ ಸಮಗ್ರ ಕವಿತೆ, ಪು. ೨೧೧)

ಚಿಂತೆ, ದುಃಖಗಳನ್ನೆಲ್ಲ ಎದುರಿಸುವ ಸಾಮರ್ಥ್ಯ, ಸಾವಿಗಿದೆಂಬುದನ್ನು ಈ ಚುಟುಕು ತಿಳಿಸುತ್ತದೆ.

**ಅಂತ್ಯ**

**ಚಿಂತೆಗಳೆ, ದುಃಖಗಳೇ**
**ಸಂಕಟಗಳೆ, ನೋವುಗಳೆ**
**ಎಷ್ಟು ಬೇಕಾದರೂ ಕಾಡಿ!**
**ಆದರೆ ಮರೆಯಬೇಡಿ**
**ಒಂದಲ್ಲ ಒಂದು ದಿನ ನಿಮ್ಮನ್ನೆಲ್ಲ**
**ನುಂಗಿ ನೊಣೆಯುತ್ತದೆ ಸಾವು!** (ಸಿಪಿಕೆ ಸಮಗ್ರ ಕವಿತೆ, ಪು. ೩೮೨)

**ಬೆಲ್ಲ**

**ಯಾರು ಯಾರಿಗೂ**
**ಕರುಬಬೇಕಾಗಿಲ್ಲ**
**ಎಲ್ಲರಿಗೂ ಕಾದಿದೆ**
**ಸಾವಿನ ಬೆಲ್ಲ!** (ಸಿಪಿಕೆ ಸಮಗ್ರ ಕವಿತೆ, ಪು. ೩೮೭)

ಇದು ಎಲ್ಲರಿಗೂ ರುಚಿಯಾದಂತಹ ಬೆಲ್ಲವಾಗಿದೆ.

**ಹಿತ**

**ಹಾಸಿಗೆ ಹಿಡಿದು**
**ನರಳುವುದಕ್ಕಿಂತ**
**ಒಮ್ಮೆಗೇ ಮಣ್ಣು ಹಿಡಿಯುವುದು**
**ಎಲ್ಲರಿಗೂ ಹಿತ!** (ಸಿಪಿಕೆ ಸಮಗ್ರ ಕವಿತೆ, ಪು. ೩೮೮)

ನರಳುವುದಕ್ಕಿಂತ ದಿಢೀರ್ ಪ್ರಾಣ ಹೋಗುವುದು ಉತ್ತಮವೆಂದಿದ್ದಾರೆ.

**ಸಮಾಧಾನ**

**ದೇವರು ಕೊಟ್ಟಿದ್ದಾನೆ ಜಗತ್ತಿಗೆ**
**ಅಪಾರ ದುಃಖ, ಯಾತನೆಗಳನ್ನು**
**ಸಮಾಧಾನದ ಸಂಗತಿಯೆಂದರೆ**
**ಸಾವನ್ನೂ ಕೊಟ್ಟಿದ್ದಾನೆ!**

(ಸಿಪಿಕೆ ಸಮಗ್ರ ಕವಿತೆ, ಪು. ೪೦೭)

ಸಾವೆಂಬುದು ಗುಪ್ತವಾಗಿರುವುದರಿಂದ ಸಾವಿನ ಮೂಲಕ ಸಮಾಧಾನವಾಗುವುದು ಒಳ್ಳೆಯದುದಾಗಿದೆ.

ಮನುಷ್ಯನು ತನ್ನ ಸ್ವಾರ್ಥಕ್ಕಾಗಿ ಇಂದು ಇತರರನ್ನು ಕೊಲ್ಲುತ್ತಿದ್ದಾನೆ. ಅದನ್ನು ಈ ಚುಟುಕುವಿನ್ನಲಿ ಸಿಪಿಕೆ ಅವರು ವ್ಯಕ್ತಪಡಿಸಿದ್ದಾರೆ.

**ಸಾವು**

**ರೇಷ್ಮೆಗಾಗಿ ಎಷ್ಟೊಂದು**
**ಹುಳುಗಳು ಸಾವು?**
**ರೇಷ್ಮೆಯುಡುವವರಿಂದಾಗಿ**
**ಎಷ್ಟೊಂದು ಮಂದಿಯ**
**ಭಾವಗಳ ಸಾವು**

(ಸಿಪಿಕೆ ಸಮಗ್ರ ಕವಿತೆ, ಪು. ೪೬೩)

ಸಾವಿನ ನಡಿಗೆ ಹೇಗಿದೆಂಬುದನ್ನು ಸಿಪಿಕೆ ಈ ಕೆಳಗಿನ ಚುಟುಕುವಿನ ಮೂಲಕ ತಿಳಿಸಿದ್ದಾರೆ.

**ನಡಗೆ**

**ಸಾವಿನಿಂದ ಬದುಕಿನೆಡೆಗೆ**
**ಎಂಬುದೆಲ್ಲ ಬರಿ ಬುರುಡೆ;**
**ನಡೆಯೋಣ ಬದುಕಿನಿಂದ**
**ಸಾವಿನ ನೆರಳಿಗೆ**
**ನೋವಿಲ್ಲದೆ, ನರಳಿಲ್ಲದೆ!**
**ಇದೇ ಸಾವಿನ ನಡಗೆಯಾಗಿದೆ**

(ಆಲಿಕಲ್ಲು ಹನಿಗವನಗಳು, ಪು. ೨೧)

**ಹೆಬ್ಬಾವು**

**ಸಾವು**
**ಗೊತ್ತೇ ಆಗದ ಹಾಗೆ**
**ಅಂಗುಲ ಅಂಗುಲ**
**ನುಂಗಿಹಾಕುವ**
**ಹೆಬ್ಬಾವು!** (ಆಲಿಕಲ್ಲು ಹನಿಗವನಗಳು, ಪು. ೧೫೨)

ಹೆಬ್ಬಾವು ಹೇಗೆ ಮನುಷ್ಯನನ್ನು ನುಂಗಿಹಾಕುತ್ತದೆಯೋ ಹಾಗೆಯೇ ಸಾವು ಹೆಬ್ಬಾವಿನ ರೀತಿಯಲ್ಲಿ ಮನುಷ್ಯನ ಜೀವನವನ್ನು ನುಂಗುತ್ತದೆ.

ಹೀಗೆ ಡಾ. ಸಿ.ಪಿ.ಕೆ.ಯವರು ಸಾವಿನ ಬಗೆಗೆ ಉತ್ತಮವಾದಂತಹ ಚುಟುಕುಗಳನ್ನು ಬರೆದು, ಅದರ ವಿವಿಧ ಭಂಗಿಯನ್ನು ಅದ್ಭುತವಾಗಿ ತಿಳಿಸುವುದರ ಮೂಲಕ ಸಾವಿನ ಮಹತ್ವವನ್ನು ಎತ್ತಿಹಿಡಿದಿದ್ದಾರೆ.

**ಹೆಣ್ಣನ್ನು ಕುರಿತು ಬರೆದ ಚುಟುಕುಗಳು**

ಹೆಣ್ಣೆಂದರೆ ಮನೆಗೆ ಭೂಷಣ, ಸೌಭಾಗ್ಯ, ದೇವಾನುದೇವತೆಯ ಜೊತೆಗೆ, ಅವಳ ಜನ್ಮವಿಲ್ಲದೆ ಇಡೀ ಜಗತ್ತಿನಲ್ಲಿ ಹುಟ್ಟುವಿಕೆ ಎಂಬುದೇ ಇರುತ್ತಿರಲಿಲ್ಲ. ಇಂತಹ ಮಹಾನ್ ಸಂಪನ್ನಳಾದ ಹೆಣ್ಣಿಗೆ ಸರಿಸಮಾನರಾದಂತಹ ವ್ಯಕ್ತಿಗಳು ಬೇರೆ ಯಾರೂ ಇಲ್ಲ.

ಹೆಣ್ಣು ಅಂದಿನಿಂದ ಇಂದಿನವರೆವಿಗೂ ಒಂದು ದಿವ್ಯಶಕ್ತಿಯಾಗಿ ಕವಿತೆಗಳಲ್ಲಿ ರೂಪಿತವಾಗಿರುವುದನ್ನು ಕಾಣಬಹುದು. ಹೆಣ್ಣು ತಾಯಿಯಾಗಿ ಅಕ್ಕಳಾಗಿ, ತಂಗಿಯಾಗಿ, ದೊಡ್ಡಮ್ಮ, ಚಿಕ್ಕಮ್ಮಳಾಗಿ, ಹೆಂಡತಿಯಾಗಿ, ಅಜ್ಜಿಯಾಗಿ ಹೀಗೆ ತನ್ನ ಸ್ಥಾನದ ವಿವಿಧ ವಿನ್ಯಾಸಗಳಿಗೆ ತನ್ನದೇ ಆದ ಸ್ಥಾನಮಾನವನ್ನು ನೀಡುತ್ತ ತನ್ನ ಗರಿಮೆಯನ್ನು ಎತ್ತಿಹಿಡಿದಿದ್ದಾಳೆ.

ಡಾ. ಸಿ.ಪಿ.ಕೆ.ಯವರು ಹೆಣ್ಣನ್ನು ಕೇಂದ್ರವಾಗಿಟ್ಟುಕೊಂಡು ಹಲವಾರು ಚುಟುಕುಗಳನ್ನು ರಚಿಸಿದ್ದಾರೆ. ಇವುಗಳ ವಿಶ್ಲೇಷಣೆ ಈ ಕೆಳಗಿನಂತಿದೆ.

**ಅರ್ಥಾನರ್ಥ**

**ಹೆಂಗಸರನ್ನು**
**ಅರ್ಥಮಾಡಿಕೊಂಡ**
**ಗಂಡಸರು ವಿರಳ;**
**ಅನರ್ಥ ಮಾಡಿಕೊಂಡವರೆ**
**ಬಹಳ!** (ಆಲಿಕಲ್ಲು ಹನಿಗವನಗಳು, ಪು. ೩೧)

ಹೆಣ್ಣಿನ ಮೇಲಿನ ಅನರ್ಥ, ಜೀವನವನ್ನೇ ನಾಶಮಾಡಿಬಿಡುವ ಶಕ್ತಿಯನ್ನು ಹೊಂದಿದೆ. ಆದ್ದರಿಂದಾಗಿ ಯಾವುದೇ ಕಾರಣಕ್ಕೂ ಅಪಾರ್ಥಮಾಡಿಕೊಳ್ಳಬಾರದು. ಆದರೆ ಮಾಡಿಕೊಳ್ಳುವವರ ಸಂಖ್ಯೆಯೇ ಅಧಿಕವಾಗಿದೆ. ಇದು ಹೆಣ್ಣಿನ ದುರಾದೃಷ್ಟವಾಗಿದೆ.

ಹೆಣ್ಣಿನ ಬಳಕೆ ಅವಶ್ಯಕತೆಯಿದ್ದಾಗ, ನಮ್ಮ ದೇಶದಲ್ಲಿ ಹೆಣ್ಣಿಗೂ ಇಷ್ಟೆಲ್ಲಾ ಘನತೆ ಗೌರವಗಳಿದ್ದರೂ ಕೇವಲವಾಗಿ ನೋಡುವುದು ಒಳ್ಳೆಯದಲ್ಲ. ಇದನ್ನು ಈ ಕೆಳಗಿನ ಚುಟುಕು ಪ್ರತಿಬಿಂಬಿಸುತ್ತದೆ.

**ಉಬ್ಬರ – ಇಳಿತ**

**ನೆರೆ ಉಕ್ಕಿದಾಗ**
**ಹೆಣ್ಣಿಗೆ ಏನೆಲ್ಲ**
**ಭರವಸೆ ಕೊಡುವ ಗಂಡು,**
**ಇಳಿದ ಮೇಲೆ ಕಣ್ಣೆತ್ತಿಯೂ**
**ನೋಡದಿರಬಹುದು!** (ಆಲಿಕಲ್ಲು ಹನಿಗವನಗಳು, ಪು. ೩೩)

ಹೆಣ್ಣೇ ಜಯದ ಪ್ರತೀಕಳಾಗಿದ್ದಾಳೆ. ಏಕೆಂದರೆ ಅವಳು ಯಾವಾಗಲೂ ಶಾಶ್ವತ–ವಾದಂತಹ ಜಯವನ್ನು ಪಡೆಯುತ್ತಾಳೆ.

**ಸೋಲು–ಗೆಲುವು**

**ಹೆಣ್ಣು ಸೋತಂತೆ**
**ತೋರುತ್ತಾಳೆ;**
**ಆದರೆ ಇವಳದು**
**ಶಾಶ್ವತ ಜಯ!**
**(ಗಂಡಿನದಾದರೂ ಕ್ಷಣಿಕ)** (ಆಲಿಕಲ್ಲು ಹನಿಗವನಗಳು, ಪು. ೪೧)

**ಅಪ್ರತಿಹತ**

**ಹೆಣ್ಣನ್ನು ಕುರಿತ**
**"ಮೂಖದಲ್ಲಿ ಮಲ್ಲಿಗೆ"**
**"ಕಹಿಯಲ್ಲ, ಎಲ್ಲ ಸಿಹಿ"**
**ಎಂಬ ಕವಿ ಸೂಕ್ತಿಗಳ ನಿಲುವು**
**ರೊಮ್ಯಾಂಟಿಕ್, ನಿಶ್ಚಿತ;**
**ಆದರೆ ಯಾವ ನಿಲುವಿನಿಂದಲೂ**
**ಅವಳ ಸೆಳೆದ ಅನಂತ**
**ಅಪ್ರತಿಹತ** (ಆಲಿಕಲ್ಲು ಹನಿಗವನಗಳು, ಪು. ೧೮೧)

ಹೆಣ್ಣು ಹೇಗೆ ಪುರುಷರನ್ನು ಸೆಳೆಯುತ್ತಾಳೆಂಬುದನ್ನು ಈ ಚುಟುಕು ತಿಳಿಸುತ್ತದೆ. ಇಂತಹ ಶಕ್ತಿ ಹೆಣ್ಣಿಗೆ ಬಿಟ್ಟರೆ ಮತ್ತಾರಿಗೂ ಇಲ್ಲ. ಆದ್ದರಿಂದಲೇ ಹೆಣ್ಣು ಅಪ್ರತಿಹತ.

ಹೆಣ್ಣಿಲ್ಲದಿದ್ದರೆ ಸಂತಾನವನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದಾಗಿ ಅವಳ ಹೊಟ್ಟೆಯಲ್ಲಿ ಲೋಕಕಲ್ಯಾಣವನ್ನು ಉಂಟುಮಾಡುವಂತದ್ದು ಇರಬಹುದು, ಎಂದು ಹೇಳಿದ್ದಾರೆ. ಆದ್ದರಿಂದ ಒಳಗೆ ಎಂಬ ಚುಟುಕು ಸೂಕ್ತವಾದುದಾಗಿದೆ.

ಒಳಗೆ

**ಗಂಡಿನ ಹೊಟ್ಟೆಯೊಳಗೆ**
**ಏನಿದ್ದೀತು?**
**ಎಲ್ಲರಿಗೂ ಗೊತ್ತು!**
**ಆದರೆ ಹೆಣ್ಣಿನ**
**ಹೊಟ್ಟೆಯಲ್ಲಿರಬಹುದು,**
**ಲೋಕಕಲ್ಯಾಣಹೇತು!** (ಆಲಿಕಲ್ಲು ಹನಿಗವನಗಳು, ಪು. ೧೯೧)

ಮಹಿಳೆಯರ ಸಹಕಾರಕ್ಕೆ ಎಲ್ಲರೂ ಋಣಿಯಾಗಿರಬೇಕಾಗುತ್ತದೆ. ಆಕೆಯ ಸಹಕಾರವಿಲ್ಲದೆ ಜೀವನವೇ ಇಲ್ಲವೆಂದು ಹೇಳಬಹುದಾಗಿದೆ. ಆದ್ದರಿಂದಾಗಿ ಹೆಣ್ಣಿನ ಸಹಕಾರವನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

ಸಹಕಾರ

**"ಮಹಿಳಾ ಸಹಕಾರ ಬ್ಯಾಂಕ್"**
**ಬ್ಯಾಂಕಷ್ಟೆ ಈಚಿನದು;**
**ಆದರೆ ಎಂದಿನಿಂದಲೂ ಉಂಟಲ್ಲದೆ**
**ಪುರುಷರಿಗೆ ಮಹಿಳೆಯರ ಸಹಕಾರ?**
**ಇಲ್ಲವಾದರೆ, ಎಲ್ಲಿರುತ್ತಿತ್ತು**
**ಜನಸಂಖ್ಯೆಯ ಈ ಮಹಾಪೂರ?** (ಸಿಪಿಕೆ ಸಮಗ್ರ ಕವಿತೆ, ಪು. ೩೧೮)

ಹೆಣ್ಣಿನ ಜನ್ಮ ಸಾರ್ಥಕವಾಗುವುದೇ ಮಗುವಿಗೆ ಜನ್ಮಕೊಟ್ಟ ನಂತರ. ಆದ್ದರಿಂದಲೇ ಮಹಿಳೆಗೆ ಎರಡು ಜನ್ಮಗಳು ಇರುತ್ತದೆ. ಅದೇ ಈ ಚುಟುಕಾಗಿದೆ.

ದ್ವಿಜರು

**ದ್ವಿಜರೆಂದರೆ ಯಾರು?**
**ನಿಜವಾಗಿ ಮಹಿಳೆಯರು:**
**ಹುಡುಗಿಯಾಗಿದ್ದಾಗ ಒಂದು ಜನ್ಮ,**
**ಹಡೆದಾಗ ಮತ್ತೊಂದು** (ಸಿಪಿಕೆ ಸಮಗ್ರ ಕವಿತೆ, ಪು. ೩೩)

ಹೆಣ್ಣಿನ ಜನ್ಮದಲ್ಲಿ ತಾಯ್ತನವನ್ನು ಪಡೆದುಕೊಳ್ಳುವುದು ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದುಕೊಂಡಿದೆ. ಅದರ ಮಹತ್ವವನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಭಾಗ್ಯ**

**ಗಂಡಿನ ಭಾಗ್ಯವೇ ಭಾಗ್ಯ**
**ನೋವಿಲ್ಲ, ನರಳಿಲ್ಲ;**
**ಅನಾಯಾಸವಾಗಿ ತಂದೆ ಹೆಸರು!**
**ತಾಯಿಯ ಪಡೆಯಬೇಕಾದರೆ,**
**ಕುಗ್ಗಿ ಹೋಗುತ್ತದೆ ಹೆಣ್ಣಿನ**
**ಅರ್ಧ ಉಸಿರು!** (ಚೋದ್ಯ-ಕುಚೋದ್ಯ, ಪು. ೩೬೭)

ಬಿಳುಪು, ಕಪ್ಪು ಎಂದು ಭೇದ ಭಾವ ಮಾಡಬಾರದು, ಮಾಡಿದರೆ ಎಂತಹ ಕುಚೇಷ್ಟೆಗೆ ಒಳಗಾಗುತ್ತಾರೆಂಬುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಕಪ್ಪು**

**ಹೆಣ್ಣು ಬೆಳ್ಳಗಿರಬೇಕೆಂದು**
**ಆಗ್ರಹಿಸುವುದು ತಪ್ಪು!**
**ಎಷ್ಟೇ ಬೆಳ್ಳಗಿದ್ದರೂ**
**ಕೂದಲೆಲ್ಲ ಹೌದಲ್ಲವೋ ಕಪ್ಪು?** (ಚೋದ್ಯ-ಕುಚೋದ್ಯ, ಪು. ೩೭೯)

ಇಂದು ಹೆಣ್ಣನ್ನು ಒಂದು ವಸ್ತುವನ್ನಾಗಿ ನೋಡುತ್ತಿದ್ದಾರೆ. ಆದರೆ ಹೆಣ್ಣು, ಹೆಣ್ಣಿನ ಸ್ಥಾನಮಾನ ಮುಗಿಲೆತ್ತರದಲ್ಲಿ ಇದೆ. ಆದ್ದರಿಂದ ಹೆಣ್ಣನ್ನು ಕೇವಲವಾಗಿ ನೋಡುವುದು ಒಳ್ಳೆಯದಲ್ಲ.

**ಜಾಹಿರಾತು**

**ಹೆಣ್ಣನ್ನು ಬಳಸುತ್ತಾರೆ**
**ಜಾಹಿರಾತಿನ ಸಾಧನವಾಗಿ;**
**ವಾಸ್ತವವಾಗಿ ಅವಳೇ ಪ್ರಕೃತಿಯ**
**ಜೀವಂತ ಜಾಹಿರಾತು!** (ಸಿಪಿಕೆ ಸಮಗ್ರ ಕವಿತೆ, ಪು. ೩೯೯)

ಆದ್ದರಿಂದಲೇ ಹೆಣ್ಣಿಗೆ ಇಷ್ಟೊಂದು ಸ್ಥಾನಮಾನವನ್ನು ನೀಡಿರುವುದು.

ಮುಗುಳ್ನಗೆಯ ಪ್ರತೀಕ ಹೆಣ್ಣಾಗಿದ್ದಾಳೆ. ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿಯಾಗುತ್ತಾಳೆ. ಮಲ್ಲಿ(ಗೆ) ಈ ಚುಟುಕುವಿನಲ್ಲಿ ಹೆಣ್ಣು ಹೇಗೆ ಮಾತಿನ ಮಲ್ಲಿ ಎಂಬುದನ್ನು ಸಹ ತಿಳಿಸಿದ್ದಾರೆ.

**ಮಲ್ಲಿ(ಗೆ)**

**ಹುಡುಗಿಯರು ಸಾಮಾನ್ಯವಾಗಿ**
**ಮಾತಿನ ಮಲ್ಲಿ**
**ಯರು ಮಾತ್ರವಲ್ಲ ನಗೆ ಮಲ್ಲಿ–**
**ಗೆಗಳೂ ಹೌದು!** (ಸಿಪಿಕೆ ಸಮಗ್ರ ಕವಿತೆ, ಪು. ೪೬೬)

ಆದ್ದರಿಂದಲೇ ಹೆಣ್ಣು ನಗೆಯ ಮಲ್ಲಿಗೆ ಆಗಿದ್ದಾರೆ.

ಸಂತಾನ ಪಡೆದುಕೊಂಡಾಗಲೇ ಹೆಣ್ಣಿನ ಜೀವನ ಸಾರ್ಥಕವಾಗುತ್ತದೆ. ಹಾಗೆಯೇ ಸಂತಾನ ಎಂಬುದು ಹಿಂದೆ ಒಂದು ಎರಡಕ್ಕೆ ಮಾತ್ರ ಸೀಮಿತವಾಗಿತ್ತು. ಆದರೆ ಇಂದು ಗಂಡು ಮಗುವಿನ ವ್ಯಾಮೋಹಕ್ಕೆ ಬಲಿಯಾಗುತ್ತಿದ್ದಾರೆ. ಅದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಸಂತಾನ**

**ಹಿಂದೆ**
**ವಿರಳವಾಗಿತ್ತು**
**ಈಗ ಬಹಳವಾಗಿದೆ**
**ಕುಂತಿಯ**
**ಸಂತಾನ!**

(ಕುಡಿ–ಕಿಡಿ, ಪು. ೧೩)

ಹೆಣ್ಣಿಗೆ ಪತಿವ್ರತೆ ಎಂದು ಹೇಳುತ್ತಾರೆ. ಆದರೆ ಇದರ ಅರ್ಥವೇನು ಎಂಬುದನ್ನು ತಿಳಿಯದೆ ಹೇಳುತ್ತಿರುತ್ತಾರೆ. ಇದರ ಅರ್ಥವನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ವ್ರತ**

**ಪತಿವ್ರತ, ಪತ್ನೀವ್ರತ**
**ಎಂದರೇನು?**
**ಅವಳೊಳಗೆ ಮತ್ತಾವ**
**ಗಂಡಿಗೂ**
**ಅವನೊಳಗೆ ಮತ್ತಾವ**
**ಹೆಣ್ಣಿಗೂ**
**ಸ್ಥಾನವಿರಬಾರದು!**

(ಕುಡಿ–ಕಿಡಿ, ಪು. ೧೬)

**ಇಬ್ಬಗೆ**

**ಕೆಲವರ ಬದುಕು**
**ಗರ್ಭ ನಿರೋಧ**
**ಸರಣಿಯಾದರೆ,**
**ಮತ್ತೆ ಕೆಲವರದು**
**ಭ್ರೂಣಹತ್ಯಾ**
**ಪರಂಪರೆ!**

(ಕುಡಿ–ಕಿಡಿ, ಪು. ೨೬)

ಹೌದು. ಇದು ಹೆಣ್ಣಿಗೆ ದೊರೆಯುತ್ತಿರುವ ಪ್ರತಿಫಲವಾಗಿದೆ.

ಅತ್ಯಾಚಾರವೆಂದರೆ ಈ ದಿನಗಳಲ್ಲಿ ಲೆಕ್ಕವೇ ಇಲ್ಲ. ಅಷ್ಟರಮಟ್ಟಿಗೆ ನಡೆಯುತ್ತಿದೆ. ಆದ್ದರಿಂದಾಗಿ ಅತ್ಯಾಚಾರ ಒಳಗೂ ನಡೆಯುತ್ತಿದೆಂಬುದನ್ನು ಸೂಕ್ಷ್ಮವಾಗಿ, ಗಂಭೀರವಾಗಿ ತಿಳಿಸಿದ್ದಾರೆ.

**ಒಳಗೆ**

**ಅತ್ಯಾಚಾರ**
**ಹೊರಗೆ ಮಾತ್ರ**
**ಜರುಗುತ್ತದೆಯೆ?**
**ಒಳಗೂ ಲೆಕ್ಕವಿಲ್ಲದಷ್ಟು**
**ನಡೆಯುತ್ತದೆ**
**ದಾಂಪತ್ಯ ಜೀವನದಲ್ಲಿ!**

(ಕುಡಿ–ಕಿಡಿ, ಪು. ೨೭)

**ಉಭಯ**

**ಹೆಣ್ಣೆಂದರೆ**
**ಮಾತೃ ಮಾತ್ರವೆ?**
**ಬಹುಸಂದರ್ಭಗಳಲ್ಲಿ**
**ಪಿತೃ ವಿಶೇಷ ಕೂಡ!**

(ಕುಡಿ–ಕಿಡಿ, ಪು. ೩೨)

ಹೆಣ್ಣು ಸರ್ವಗುಣ ಸರ್ವಪಾತ್ರಳು ಆಗಿದ್ದಾಳೆಂಬುದನ್ನು ಈ ಚುಟುಕು ತಿಳಿಸುತ್ತದೆ.

ಹೆಣ್ಣಿನ ಮಹತ್ವವನ್ನು ಈ ಕೆಳಗಿನ ಚುಟುಕು ಸ್ಪಷ್ಟಪಡಿಸುತ್ತದೆ.

**ವ್ಯತ್ಯಾಸ**

**ಗಂಡು ಒಟ್ಟನಲ್ಲಿ**
**ಗಂಡು ಅಥವಾ ಗುಂಡು,**
**ಅಷ್ಟೇ!**
**ಹೆಣ್ಣಾದರೊ ಮೈಯ**
**ಕಣಕಣದಲ್ಲೂ ಹೆಣ್ಣು!** (ಸಿಪಿಕೆ ಸಮಗ್ರ ಕವಿತೆ, ಪು. ೩೨)

ಹೆಣ್ಣು, ಗಂಡಿನ ನಡುವಿನ ಅಂತರವನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಅಂತರ**

**ಹೆಣ್ಣೆಂದರೆ**
**ಆಕಾಶ, ನಕ್ಷತ್ರ**
**ನೀಹಾರಿಕೆ**
**ಮಿಂಚಿನ ರೆಕ್ಕೆ!**
**ಗಂಡು ಬರಿ ನೆಲ, ಮಣ್ಣು;**
**ಗರ್ವ ಏತಕ್ಕೆ!**

(ಸಿಪಿಕೆ ಸಮಗ್ರ ಕವಿತೆ, ಪು. ೩೩)

ಇಂದು ಹೆಣ್ಣಿನ ಉಡುಗೆ-ತೊಡುಗೆಯಲ್ಲಿ ಕಂಡುಬರುವಂತಹ ವ್ಯತ್ಯಾಸವು ಈ ಚುಟುಕುವಿನಲ್ಲಿ ಕಂಡುಬರುತ್ತದೆ.

**ವಿದಾಯ**

**ನೀರೆಯರ**
**ಭಾಗ್ಯವಾಗಿದ್ದ**
**ಸೀರೆಯೇ ನಿನಗಿದೋ**
**ವಿದಾಯ!**
**(ತಸ್ಮೈ ನಮಃ ಕಾಲಾಯ)**

(ಸಿಪಿಕೆ ಸಮಗ್ರ ಕವಿತೆ, ಪು. ೪೦)

ಹೆಣ್ಣೆಂಬುವಳು ನೋವಿನ ಸಂಕಷ್ಟದಲ್ಲಿಯೂ ತನ್ನ ಜೀವನವನ್ನು ನಡೆಸಿಕೊಂಡು ಹೋಗುವುದನ್ನು ತಿಳಿಸಿದ್ದಾರೆ.

**ನೋವು**

**ಮೊದಲೊ ಹೆಣ್ಣಿನ**
**ಹಣೆಬರಹ ನೋವು;**
**ಕವಯಿತ್ರಿಯೂ, ಆದರೆ**
**ಹೇಳುವುದೇನು!** (ಸಿಪಿಕೆ ಸಮಗ್ರ ಕವಿತೆ, ಪು. ೫೩)

**ತಪ್ಪು**

**ಗಂಡನ್ನು ತೀವ್ರವಾಗಿ**
**ಆಕ್ಷೇಪಿಸುವುದು ತಪ್ಪು;**
**ಹೆಣ್ಣನ್ನು ಕುತೂಹಲಾಸ್ಪದವಾಗಿ**
**ಸೃಷ್ಟಿಸಿದ್ದು**
**ಹಾಳು ವಿಧಿಯ ತಪ್ಪು?** (ಸಿಪಿಕೆ ಸಮಗ್ರ ಕವಿತೆ, ಪು. ೬೭)

ಹೆಣ್ಣಿಗೆ ದೇವರು ಅವಳದೇ ಸೌಂದರ್ಯವನ್ನು ನೀಡಿದನು. ಆ ಸೌಂದರ್ಯವನ್ನು ಪುರುಷರು ಸವಿಯುತ್ತಾರೆ. ಆದರೆ ನಾವು ಅದನ್ನು ತಪ್ಪು ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದಾಗಿ ಇದು ವಿಧಿಯ ತಪ್ಪು ಎಂದು ಹೇಳಿರುವುದಾಗಿದೆ.

**(ಕು)ರೂಪ**

ದಿಟ,
**"ಸ್ತ್ರೀ ರೂಪಮೆ ರೂಪಂ!"**
**ಆದರೆ ಮನಸ್ಸು ಕುರೂಪ**
**ಇರಲೂಬಹುದು!** (ಸಿಪಿಕೆ ಸಮಗ್ರ ಕವಿತೆ, ಪು. ೬೭)

ಸ್ತ್ರೀಯು ಹೇಗೆ ರೂಪವನ್ನು ಪಡೆದಿದ್ದಾಳೆಯೋ ಹಾಗೆಯೇ ಆಕೆಯ ಮನಸ್ಸು ಸಹ ಕುರೂಪವಾಗಿದೆ.

**ಸತ್ಯ**

**"ಹೆಣ್ಣು ಮಾಯೆಯಲ್ಲ!"**
**ಎಂದ ಅಲ್ಲಮ**
**ಹೌದು;**
**ಅವಳು ಸತ್ಯಸ್ಯ**
**ಸತ್ಯ!** (ಸಿಪಿಕೆ ಸಮಗ್ರ ಕವಿತೆ, ಪು. ೭೧)

ಸತ್ಯದ ಪ್ರತಿರೂಪವೆ ಹೆಣ್ಣು ಎಂದು ಹೇಳಿದರೆ ತಪ್ಪಾಗಲಾರದು. ಆದ್ದರಿಂದಲೇ ಹೆಣ್ಣನ್ನು ಸತ್ಯಸ್ಯ ಸತ್ಯ ಎಂದು ಕರೆದಿರುವುದು.

ಹೆಣ್ಣಿನ ವಿಶಿಷ್ಟತೆ, ಅದ್ಭುತವಾದದ್ದಾಗಿದೆ. ಅದನ್ನೇ ಈ ಚುಟುಕು ಹೀಗೆ ತಿಳಿಸುತ್ತದೆ.

**ವೈಶಿಷ್ಟ್ಯ**

**ಗಂಡಿನದು**
**ಕೇವಲ ವಿಸರ್ಜನ;**
**ಹೆಣ್ಣಿನದಾದರೋ**
**ಸೃಜನ ಸಹ!** (ಸಿಪಿಕೆ ಸಮಗ್ರ ಕವಿತೆ, ಪು. ೭೩)

**ಬೆಳವಣಿಗೆ**

**ಹೆಣ್ಣಿನ ಹೊಟ್ಟೆ**
**ಬೆಳೆಯದೆ**
**ಮನುಕುಲ**
**ಬೆಳೆಯುವುದೆಂತು?**
**ಆದರೆ ಗಂಡಿನ ಹೊಟ್ಟೆಯೂ**
**ಹಾಗೆ (ಸಿಕ್ಕಾಪಟ್ಟೆ)**
**ಅಳತೆಗೆಟ್ಟರೆ ಹೇಗೆ?** (ಸಿಪಿಕೆ ಸಮಗ್ರ ಕವಿತೆ, ಪು. ೭೭)

ಹೆಣ್ಣಿನ ಹೊಟ್ಟೆ ಬೆಳೆಯುವುದರಿಂದ ಮನುಕುಲದ ಬೆಳವಣಿಗೆ ಆಗುತ್ತದೆ. ಆದರೆ ಗಂಡಿನ ಹೊಟ್ಟೆ ಬೆಳೆಯುವುದು ವ್ಯರ್ಥವಾಗಿದೆ.

**ತಾಯಿ**

**ತಾಯಿಗಾಗಿ**
**ಹೆಂಡತಿಗೆ ಹಿಂಸೆಯೆ?**
**ಅವಳೂ ಒಂದು**
**ರೀತಿಯಲ್ಲಿ ತಾಯಿ!** (ಸಿಪಿಕೆ ಸಮಗ್ರ ಕವಿತೆ, ಪು. ೮೦)

ತಾಯಿಗಾಗಿ ಹೆಂಡತಿಗೆ ಚಿತ್ರಹಿಂಸೆಯನ್ನು ಕೊಡಬಾರದು. ಅವಳೂ ಕೂಡ ತಾಯಿಯ ಹಾಗೆಯೇ, ಇಬ್ಬರೂ ಸಹ ಗಂಡಿನ ಜೀವನದಲ್ಲಿ ಎರಡು ಕಣ್ಣುಗಳಾಗಿ ಕೆಲಸ ಮಾಡುತ್ತಾರೆ.

**ಅಂತರ್ಧಾನ**

**ಇಂದು ಕನ್ಯೆಗೆ**
**ಗರ್ಭಾದಾನ**
**ಆಗುವ ಅನೇಕ**
**ಪ್ರಕರಣಗಳಲ್ಲಿ**
**'ಕಾರಣ ಪುರುಷ'**
**ಅಂತರ್ಧಾನ!**

(ಸಿಪಿಕೆ ಸಮಗ್ರ ಕವಿತೆ, ಪು. ೧೨೪)

ಹೌದು ಈ ಗರ್ಭಾದಾನಕ್ಕೆ ಮೂಲ ಕಾರಣ ಪುರುಷ ಈ ಗಂಡೇ ಕೂಡ ಕಾರಣನಾಗಿದ್ದಾನೆ. ಆದ್ದರಿಂದ ಸರ್ವವಿಧದಲ್ಲಿ ಪುರುಷರಿಂದ ಹೆಣ್ಣು ಶೋಷಣೆಗೆ ಒಳಪಡುತ್ತಿದ್ದಾಳೆ.

**ಕರಡಿ**

**ಈಗ ಗಂಡು, ಹೆಣ್ಣಿನ**
**ಪ್ರೀತಿಯ ನಡುವೆ**
**ಅತ್ಯಾಚಾರದ ಕರಡಿ**
**ಅಡ್ಡ ಬರುತ್ತಿದೆ!**

(ಸಿಪಿಕೆ ಸಮಗ್ರ ಕವಿತೆ, ಪು. ೧೨೬)

ಹೀಗೆ ಇವರಿಬ್ಬರ ಪ್ರೀತಿಯ ನಡುವೆ ಅತ್ಯಚಾರವೆಂಬ ಪೆಡಂಭೂತ ಅಡ್ಡಿಬರುತ್ತಿದೆ.

ಅದೇ ಈ ಕೆಳಗಿನ ಚುಟುಕು ಅತ್ಯಾಚಾರದ ಪ್ರತೀಕದಂತಿದೆ. ಇದು ಅದ್ಭುತ-ವಾದಂತಹ ಪ್ರಶ್ನಾತೀತ ಚುಟುಕಾಗಿದೆ.

**ಅತ್ಯಾಚಾರ**

**ಹೆಣ್ಣಿನ ಮೇಲೆ**
**ಗಂಡು ಮಾಡುವುದು ಮಾತ್ರ**
**ಅತ್ಯಾಚಾರವೇ?**
**ಹೆಣ್ಣು ಮಾಡಬಲ್ಲಳು**
**ಗಂಡಿನ ಮೇಲೆ!**
**(ಅದನ್ನು ಯಾರು? ಅತ್ಯಾಚಾರ ಎನ್ನುವುದಿಲ್ಲ)**

(ಸಿಪಿಕೆ ಸಮಗ್ರ ಕವಿತೆ, ಪು. ೧೨೯)

**ತ್ರಿವಿಧ**

**"ಸ್ತ್ರೀಯರಲ್ಲಿ ಮೂರು ವಿಧ;**
**ಗೃಹಿಣಿಯರು**
**ವೇಶ್ಯೆಯರು ಮತ್ತು**
**ಗೃಹಿಣೀ ವೇಶ್ಯೆಯರು**
**(ಮೂರನೆಯ ಬಗೆ ಗೌರವಾನ್ವಿತ?)** (ಅಹನ್ಯ ಹನಿ, ಪು. ೮)

ಈ ತ್ರಿವಿಧಗಳು ಆಗಲೂ ಪುರುಷನೇ ಕಾರಣನಾಗಿದ್ದಾನೆ. ಆದ್ದರಿಂದಾಗಿ ಮೂರು ವೃತ್ತಿಗಳ ಮೂಲಕ ಹೆಣ್ಣು ಜೀವನವನ್ನು ನಡೆಸುತ್ತಿದಾಳೆ.

ಹೆಣ್ಣಿನ ಪುಣ್ಯದ ವರ್ಣನೆ ಈ ಚುಟುಕುವಿನಲ್ಲಿ ಅದ್ಭುತವಾಗಿ ಕಂಡುಬಂದಿದೆ.

**ಪುಣ್ಯಕೋಟಿ**

**ಬಹಳಷ್ಟು ಮಹಿಳೆಯರು**
**ಇತಿಹಾಸದುದ್ದಕ್ಕೂ**
**"ಖಂಡವಿದೆ ಕೋ,**
**ಮಾಂಸವಿದೆ ಕೋ!"**
**ಎಂದು ಅರ್ಪಿಸಿಕೊಂಡು**
**ಬದುಕಿದ**
**ಪು(ಪ)ಣ್ಯ ಕೋಟಿಗಳು!** (ಅಹನ್ಯ ಹನಿ, ಪು. ೧೪)

**ಸಾಧನೆ**

**ಹೆಣ್ಣು ಏರುದ**
**ಎತ್ತರಕ್ಕೆ**
**ಗಂಡು ಏರಲಾರ;**
**ಇಳಿಯುವ ಆಳಕ್ಕೆ**
**ಇಳಿಯಲಾರ** (ಅಹನ್ಯ ಹನಿ, ಪು. ೪೭)

ಹೆಣ್ಣು ಮಾಡದೇ ಇರುವ ಸಾಧನೆಯಿಲ್ಲ ಎಂದು ಹೇಳಬಹುದಾಗಿದೆ. ಏಕೆಂದರೆ ಮನಸ್ಸು ಮಾಡಿದರೆ ವಿನಾಶ, ಉದ್ಧಾರ ಎರಡೂ ಮಾಡಬಲ್ಲ ಸಬಲೆ ಹೆಣ್ಣಾಗಿದ್ದಾಳೆ.

ಹೆಣ್ಣಿನ ವೈವಿಧ್ಯವನ್ನು ಈ ಕೆಳಗಿನ ಚುಟುಕು ತಿಳಿಸುತ್ತಾ ಹೋಗುತ್ತದೆ.

**ವೈವಿಧ್ಯ**

**ಹೆಣ್ಣು ಮಲ್ಲಿಗೆಯಾಗಬಹುದು,**
**ತಾವರೆಯಾಗಬಹುದು,**

**ಗುಲಾಬಿಯಾಗಬಹುದು,**

**ಕೆಂಡಸಂಪಿಗೆಯಾಗಬಹುದು**

**ಕೆಲವೊಮ್ಮೆ ಕೆಂಡವೂ!** (ಅಹನ್ಯ ಹನಿ, ಪು. ೮೩)

ತಾಯಿಯ ಘನತೆ, ಆಕೆಯ ಸ್ಥಾನಮಾನವೇನೆಂಬುದನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

**ಜೀವ**

**ಸಾವಿನ ನಡುವೆಯೆ**

**ಸಾವಿನಿಂದಲೆ**

**ಅರಳುತ್ತದೆ ಜೀವ;**

**ತಾಯಿ ಸತ್ತು ಮಗು**

**ಬದುಕುವುದುಂಟು** (ಅಹನ್ಯ ಹನಿ, ಪು. ೧೩೧)

ಹೀಗೆ ಸಿಪಿಕೆಯವರು ಹೆಣ್ಣಿನ ಬಗ್ಗೆ ಉತ್ತಮವಾದಂತಹ ಸಮಾಜಕ್ಕೆ ಒಪ್ಪುವಂತಹ ಚುಟುಕುಗಳ ರಚನೆಯ ಮೂಲಕ ತಮ್ಮದೇ ಆದ ವಿಶಿಷ್ಟತೆ, ಹೆಣ್ಣಿನ ಪರಿಕಲ್ಪನೆಯನ್ನು ಚಿತ್ರಿಸಿದ್ದಾರೆ.

ಒಟ್ಟಾರೆಯಾಗಿ ಚುಟುಕುಗಳ ಅವಲೋಕನದಿಂದ ಹೆಣ್ಣಿನ ಸಾನಮಾನವನ್ನು ಎತ್ತಿಹಿಡಿದ್ದಾರೆ. ಹಾಗೆಯೇ ಹೆಣ್ಣಿನ ಆಗು-ಹೋಗುಗಳನ್ನು ಸಹ ತಿಳಿಸಿದ್ದಾರೆ.

# ಅಧ್ಯಾಯ – ೫

## ಡಾ. ಸಿ.ಪಿ.ಕೆ. ಅವರ ಚುಟುಕುಗಳ ವೈಶಿಷ್ಟ್ಯತೆ

ಡಾ. ಸಿ.ಪಿ.ಕೆ.ಯವರು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಹಲವು ಆಯಾಮಗಳಿಂದ ಅರ್ಥಪೂರ್ಣವಾಗಿ ವಿಸ್ತರಿಸಿದಂತಹ ವಿದ್ವಾಂಸರು ಸಾಹಿತ್ಯ ಕ್ಷೇತ್ರದಲ್ಲಿ ಸಿ.ಪಿ.ಕೆ. ಎಂಬ ಮೂರಕ್ಷರಕ್ಕೆ ತ್ರಿವಿಕ್ರಮತ್ವವಿದೆ. ವಾಮನ ಶಕ್ತಿಯ ವಿಕಸನವೂ ಇದೆ. ಆದ್ದರಿಂದಾಗಿ ಸಿ.ಪಿ.ಕೆ.ಯವರು ನಿತ್ಯ ಕ್ರಿಯಾಶೀಲತೆಯ ಜಂಗಮನೆನಿಸಿಕೊಂಡಿದ್ದಾರೆ.[೧]

ಡಾ. ಸಿ.ಪಿ.ಕೆ.ಯವರ ಚುಟುಕುಗಳನ್ನು ಇತರೆ ಕವಿಗಳ ಚುಟುಕುಗಳಿಗೆ ಹೋಲಿಸಿಕೊಂಡರೆ ಇವರ ಚುಟುಕುಗಳಲ್ಲಿ ವೈಶಿಷ್ಟ್ಯತೆ ಇರುವುದನ್ನು ಗುರುತಿಸಬಹುದಾಗಿದೆ. ಅಲ್ಲದೆ ಇವರು ತಮ್ಮದೇ ಆದ ಶೈಲಿಯಲ್ಲಿ ವಿಶಿಷ್ಟ ರೀತಿಯಲ್ಲಿ ರಚನೆಯನ್ನು ಮಾಡಿದ್ದಾರೆ. ಯಾವುದೇ ಕ್ಷೇತ್ರವಾದರು ಸರಿಯೇ ಆ ಕ್ಷೇತ್ರದ ಆಗು–ಹೋಗುಗಳನ್ನು ತಿಳಿಸುವುದರ ಮೂಲಕ, ಕುಟುಕುವಿಕೆಯ ಚಾಕಚಕ್ಯತೆಯನ್ನು ತೋರ್ಪಡಿಸಿದ್ದಾರೆ. ಅಲ್ಲದೆ ಪರೋಕ್ಷವಾಗಿ ಇಂತಹ ಆಗುಹೋಗುಗಳನ್ನು ತಿದ್ದುಕೊಳ್ಳಬೇಕೆಂದು ಸಹ ಎಚ್ಚರಿಕೆಯನ್ನು ನೀಡುವಂತಿದೆ. ಚುಟುಕುಗಳು. ಆದ್ದರಿಂದಾಗಿ ಇವರ ಚುಟುಕುಗಳು ಇಂತಹ ಗಂಭೀರತೆಗೆ ಒಳಪಟ್ಟಿರುತ್ತದೆ. ಹೀಗೆ ಸಿಪಿಕೆಯವರ ಚುಟುಕುಗಳಲ್ಲಿ ಸಂಕ್ಷಿಪ್ತವಾಗಿ ಇಡಿಯಾಗಿ, ಬಿಡಿಯಾಗಿ, ತನಗೆ ತಾವೇ ಸ್ವತಂತ್ರನಾಗಿ, ಬಂಧುರವಾಗಿ ಇವೇ ಮುಂತಾದಂತಹ ಕ್ರಿಯಾಶೀಲ ಅಂಶಗಳು ಅಡಗಿರುವುದನ್ನು ಕಾಣಬಹುದಾಗಿದೆ.[೨]

ಡಾ. ಸಿ.ಪಿ.ಕೆ.ಯವರ ಚುಟುಕುಗಳ ವೈಶಿಷ್ಟ್ಯವನ್ನು ಈ ಕೆಳಕಂಡ ಹೋಲಿಕೆಗಳ ಮೂಲಕ ಗುರ್ತಿಸಬಹುದಾಗಿದೆ.

ಎಚ್. ಡುಂಡಿರಾಜ್‌ರವರು ಸೋಲು–ಗೆಲುವಿನ ನೆಲೆಯನ್ನು ಈ ರೀತಿ ತಮ್ಮ ಚುಟುಕುವಿನಲ್ಲಿ ಪ್ರಸ್ತುತಪಡಿಸಿದ್ದಾರೆ.

**ಸೋಲು–ಗೆಲುವು**

**ಪಾಕ್ ವಿರುದ್ಧ ಭಾರತ**
**ಸೋತು ಹೋಯಿತು ಅಂತ**
**ಎಮೋಟ್ ಎಸೆಯುವಷ್ಟು**

೧. ಸರಸತಿಯ ಪರಪುತ್ರ, ಡಾ. ಮಳಲಿ ವಸಂತಕುಮಾರ್, ಸಂವಹನ ಪ್ರಕಾಶನ, ಮೈಸೂರು, ೨೦೦೯, ಪು. ೧೫.

೨. ಅದೇ., ಪು. ೧೯.

**ಕೋಪಾನಾ?**

**ಮುಂದಿನ ಪಂದ್ಯದಲ್ಲಿ**

**ಗೆಲ್ಲಬಹುದು ಅಂದುಕೊಳ್ಳಿ**

**ಸೋಲೇ ಗೆಲುವಿನ ಸೋಪಾನ**

(ಹನಿವಾಹಿನಿ, ಎಚ್.ಡುಂಡಿರಾಜ್, ಪು. ೩೮)

ಹೀಗೆ ಡುಂಡಿರಾಜ್‌ರವರು ಸೋಲು-ಗೆಲುವಿನ ನಿಲುವನ್ನು ತಿಳಿಸಿ ಸೋಲೇ ಗೆಲುವಿನ ಮೆಟ್ಟಿಲು ಎಂದು ತಿಳಿಸಿದರು.

ಡಾ. ಸಿ.ಪಿ.ಕೆ.ಯವರು ಸೋಲು-ಗೆಲುವಿನ ಬಗ್ಗೆ ಈ ರೀತಿ ನಿಲುವನ್ನು ವ್ಯಕ್ತಪಡಿಸಿದ್ದಾರೆ.

**ಗೆಲುವು**

**ಮತ್ತೆಲ್ಲಿಯಾದರೂ ಸೋಲಬಹುದು**

**ಬದುಕು;**

**ಆದರೆ ಗೆದ್ದೇ ಗೆಲ್ಲುತ್ತದೆ,**

**ಪ್ರಾಯ ಪ್ರೇಯಸಿಯರ ಬಿಸಿ ಬಿಸಿ**

**ಪಿಸುಮಾತುಗಳಲ್ಲಿ!** (ಸಿಪಿಕೆ ಸಮಗ್ರ ಕವಿತೆ, ಪು. ೪೬೧)

ಹೀಗೆ ಸಿ.ಪಿ.ಕೆ.ಯವರು ಪ್ರೇಯಸಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುವುದರ ಮೂಲಕ, ಬದುಕು ಎಂಬುದು ಪ್ರೇಯಸಿಯರ ಬಿಸಿ ಬಿಸಿ ಪಿಸುಮಾತುಗಳಲ್ಲಿ ದೊರೆಯುವ ಗೆಲುವನ್ನು ವ್ಯಕ್ತಪಡಿಸಿದ್ದಾರೆ. ಹೇಗೆ ಹೊರ ಅರ್ಥದಲ್ಲಿ ಡುಂಡಿರಾಜ್‌ರವರು ಸೋಲು ಗೆಲುವಿನ ಬಗ್ಗೆ ತಿಳಿಸಿದರೆ ಡಾ. ಸಿ.ಪಿ.ಕೆ.ಯವರ ವಿಶಿಷ್ಟತೆ ಈ ಮೇಲಿನ ಚುಟುಕಲ್ಲಿ ಕಂಡುಬರುತ್ತಿದೆ.

ದಿನಕರ ದೇಸಾಯಿಯವರು ತಮ್ಮ ಚೌಪದಿಯಲ್ಲಿ ಮಂತ್ರಿಗಳು ಬರುತ್ತಿರುವಾಗ ನಮ್ಮ ಸಮಾಜದಲ್ಲಿ ನಡೆಯುವ ಸಿಂಗಾರವನ್ನು ವರ್ಣಿಸುತ್ತಿದ್ದಾರೆ.

**ಮಂತ್ರಿಗಳು ಬಂದಾಗ**

**ಹರಿಜನರ ಮನೆ ಹೊಲಸು ನಾರುತಿರೆ ಪಾಪ**

**ಮಂತ್ರಿಗಳು ಬಂದಾಗ ಹಾಕಿದರು ಧೂಪ**

**ಗಲ್ಲಿ ಗಲ್ಲಿಗೆ ದೊಡ್ಡ ತೋರಣವ ಹಚ್ಚಿ**

**ಬೀದಿ ಬೀದಿಗೆ ಉರಿಸಿದರು ಅಗರಬತ್ತಿ**

(ದಿನಕರ ದೇಸಾಯಿ ಚೌಪದಿ, ಪು. ೩೬೦)

ಹೀಗೆ ಹಳ್ಳಿಗಳಲ್ಲಿ ಇಂತಹ ಬಡತನದ ಬೇಗೆಯಲ್ಲಿ ನೋವನ್ನು ಅನುಭವಿಸುತ್ತಿರುವ ಹರಿಜನರಿಗೆ ಮಂತ್ರಿಗಳು ಬರುತ್ತಾರೆಂದರೆ ಹಬ್ಬವೋ ಹಬ್ಬ. ಆದ್ದರಿಂದ ಇಂತಹ ಶೃಂಗಾರವನ್ನು ಮಾಡುತ್ತಾರೆ. ಆದರೆ ಏನು ಪ್ರಯೋಜನ ಮಂತ್ರಿಗಳಾದ ಮೇಲೆ ಅವರ ಕೆಲಸ ಏನೇನೂ ಇಲ್ಲ. ದೋಚುವುದು ಒಂದೇ ಆಗಿರುತ್ತದೆ. ಹೀಗೆ ದೇಸಾಯಿಯವರು ಮಂತ್ರಿಗಳು ಬಂದಾಗ ಎಂದು ಹೇಳಿದ್ದಾರೆ. ಆದರೆ ಡಾ. ಸಿ.ಪಿ.ಕೆ. ಅವರ ಮೂಟೆ ಎಂಬ ಚುಟುಕು ಈ ಕೆಳಕಂಡಂತಿದೆ.

**ಮೂಟೆ**

**ಇಂದಿನ ಬಹುಮಂದಿ**
**ರಾಜಕಾರಣಿಗಳಿಗೆ**
**ಎಲ್ಲಿದೆ ಮುನ್ನೋಟ?**
**ಅವರ ಸದ್ಯದ ಗುರಿ**
**ಗರಿಗರಿ,**
**ನೋಟುಗಳ ಮೂಟೆ**
**ಅಷ್ಟೇ!** (ಸಿಪಿಕೆಯವರ ಚುಟುಕುಗಳು)

ಇಂದಿನ ಮಂತ್ರಿ, ರಾಜಕಾರಣಿಗಳನ್ನು ದೇವರೆಂದರೆ ದೇಸಾಯಿಯವರು, ಡಾ. ಸಿ.ಪಿ.ಕೆ.ಯವರುಇಂತಹ ಮಂತ್ರಿಗಳ ಮುಖ್ಯ ಗುರಿ ನೋಟುನೋಟುಗಳಮನೂಟೆ ಮಾಡುವುದಾಗಿದೆ ಎಂದು ತನ್ನ ವಿಶಿಷ್ಟತೆಯನ್ನು ಈ ಮೇಲಿನ ಚುಟುಕುವಿನಲ್ಲಿ ತಿಳಿಸಿದ್ದಾರೆ.

ಅಕಬರ ಅಲಿಯವರು ಮತ-ಧರ್ಮದ ಬಗ್ಗೆ ಈ ಕೆಳಕಂಡಂತೆ ತಿಳಿಸಿದ್ದಾರೆ.

**ಮತ-ಧರ್ಮ**

**ನಿಜಕ್ಕೂ ಮತಧರ್ಮದ ಸಾರ**
**ಹೆಣ್ಣಿನ ತಿರುಳಿನ ಹಾಗೆ**
**ರುಚಿಕರ, ಹಿತಕರ**
**ಅದರದರ ಬಹಿರಾಚಾರ**
**ಬಾತಿಗೆ ಬಾರದ ಸಿಪ್ಪೆಯ ಥರ?**

(ಅಕಬರ ಅಲಿ ಚುಟುಕುಗಳು, ಪು. ೧೦೨)

ಮತಧರ್ಮದ ಸಾರ ಹೆಣ್ಣಿನ ತಿರುಳಿನ ಹಾಗೆ ರುಚಿಕರವಾಗಿರುತ್ತೆ ಹಿತಕರವಾಗಿರುತ್ತೆ. ಆದರೆ ಬಾತಿಗೆ ಬಾರದ ಸಿಪ್ಪೆಯ ಥರ ಎಂದು ವ್ಯರ್ಥದ ಬಗ್ಗೆ ತಿಳಿಸುತ್ತಾರೆ.

ಡಾ. ಸಿ.ಪಿ.ಕೆ.ಯವರು ಮತಾಂಧತೆಯ ಬಗ್ಗೆ ಈ ಕೆಳಗಿನ ಚುಟುಕುವಿನಲ್ಲಿ ತಿಳಿಸಿದ್ದಾರೆ.

**ಮತಾಂಧತೆ**

**ವೋಟಿನ ಮೇಲಷ್ಟೇ ಕಣ್ಣಿಟ್ಟು**
**ಕೆಲಸಮಾಡುವ ಮಂದಿ**
**ನಿಜವಾಗಿ ಮತಾಂಧರು**
**ಮತಪೆಟ್ಟಿಗೆಯೆ ಅವರ ದೇವರು!** (ಸಿಪಿಕೆ ಸಮಗ್ರ ಕವಿತೆ, ಪು. ೪೦೭)

ಹೀಗೆ ಮತಾಂಧರಿಗೆ ಮತಪೆಟ್ಟಿಗೆಯೆ ಅವರಿಗೆ ದೇವರಾಗಿರುತ್ತಾರೆಂಬುದಾಗಿ ಮತಾಂಧತೆಯ ಬಗ್ಗೆ ತಮ್ಮ ವಿಶಿಷ್ಟತೆಯನ್ನು ತಿಳಿಸಿದ್ದಾರೆ.

ಚೆನ್ನವೀರ ಕಣವಿಯವರ ಗೃಹಿಣಿ ಚುಟುಕುವಿನಲ್ಲಿ ಗೃಹಿಣಿ ಹೇಗೆ ಜೇನಿನ ಸವಿ, ಗೀತಸುಧೆಯಾಗಿ ಕಾಣುತ್ತಾಳೆಂಬುದನ್ನು ತಿಳಿಸಿದ್ದಾರೆ.

**ಗೃಹಿಣಿ**

**ಏನು ಕುಡಿದರೆ ತಾನೆ ನೀರು ಕುಡಿದಂತಹುದು?**
**ಎಲ್ಲ ಹೂವಿನ ರಸಕು ಒಸರುವುದೆ ಜೇನು?**
**ಏರುವುದು ಇಳಿಯುವುದು ಸ್ವರದ ತಾನಿನ ತಾನು**
**ನೀರಮಡಿ, ಜೇನಸವಿ, ಗೀತಸುಧೆ ನೀನು**

(ಕಣವಿ ಚುಟುಕುಗಳು, ಪು. ೩೯)

ಡಾ. ಸಿ.ಪಿ.ಕೆ.ಯವರು ತಮ್ಮ ಚುಟುಕುವಿನಲ್ಲಿ ಹೆಣ್ಣಿನ ವೈವಿಧ್ಯತೆಯನ್ನು ತಿಳಿಸಿದ್ದಾರೆ.

**ವೈವಿಧ್ಯ**

**ಹೆಣ್ಣು ಮಲ್ಲಿಗೆಯಾಗಬಹುದು,**
**ತಾವರೆಯಾಗಬಹುದು,**
**ಗುಲಾಬಿಯಾಗಬಹುದು**
**ಕೆಂಡಸಂಪಿಗೆಯಾಗಬಹುದು;**
**ಕೆಲವೊಮ್ಮೆ ಕೆಂಡವೂ!** (ಅಹಸ್ಯ ಹನಿ, ಪು. ೮೩)

ಹೀಗೆ ಸಿ.ಪಿ.ಕೆ.ಯವರು ಹೆಣ್ಣು ಕೇವಲ ಹೂ ಮಾತ್ರವಲ್ಲ. ಒಲಿದರೆ ನಾರಿ ಮುನಿದರೆ ಮಾರಿಯೂ ಆಗಬಹುದೆಂದು ತಮ್ಮ ಚುಟುಕುವಿನ ವಿಶಿಷ್ಟತೆಯನ್ನು ಎತ್ತಿಹಿಡಿದಿದ್ದಾರೆ.

ಚಂಪಾರವರು ಮೌನವೆಂಬುದನ್ನು ತಮ್ಮ ಚುಟುಕುವಿನಲ್ಲಿ ಈ ರೀತಿ ಬಣ್ಣಿಸಿದ್ದಾರೆ.

**ಮೌನ : ತುಂಬಿದ ಕೊಡ**
**ಮೌನ : ತುಂಬಿದ ಕೊಡ**
**ಕವನ ತುಳುಕಾಡಿದೆ**
**ತುಟಿ : ತುಂಬಿದ ಕಡಲು**
**ಮೌನ ಬಳುಕಾಡಿದೆ**
**ಕಣ್ಣು : ತುಂಬಿದ ಕೊಳ**
**ತುಟಿ ಬಲುಕಾಡಿದೆ** (ಚಂಪಾರವರ ಚುಟುಕುಗಳು, ಪು. ೩೮)

ಹೀಗೆ ಚಂಪಾರವರು ಮೌನದ ನೆಲೆಯನ್ನು ತನ್ನದೇ ಆದರೀತಿಯಲ್ಲಿ ವರ್ಣಿಸಿದ್ದಾರೆ. ಆದರೆ ಸಿ.ಪಿ.ಕೆ.ಯವರ ಚುಟುಕುವಿನಲ್ಲಿ ವಿಶಿಷ್ಟತೆಯೆಂಬುದು ಒಳಗಿನಿಂದಲೇ ಹುದುಗಿ ಬರುವಂತಿರುತ್ತದೆ.

**ಮೌನ–ಧ್ಯಾನ**

**ಕೆಲವು ಸಂದರ್ಭಗಳಿರುತ್ತದೆ;**
**ಮಾತು**
**ಮೂಕವಾಗುತ್ತದೆ;**
**ಮೌನ**
**ಧ್ಯಾನಸ್ಥವಾಗುತ್ತದೆ** (ಕುಡಿ–ಕಿಡಿ ಹನಿಗವನಗಳು, ಪು. ೧೨)

ಹೀಗೆ ಸಿ.ಪಿ.ಕೆ.ಯವರು ಮೌನ–ಧ್ಯಾನದ ಬಗ್ಗೆ ತಮ್ಮದೇ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಮೌನ ಧ್ಯಾನಸ್ಥವಾಗುತ್ತವೆಂಬುದರಲ್ಲಿ ವಿಶಿಷ್ಟತೆಯನ್ನು ನಾವು ಕಾಣಲಾಗಿದೆ.

ಧ್ರವರಾಜ ಜೋಶಿಯವರು ಲಂಚ ಎಂಬುದು ಹೇಗೆ ಜನರನ್ನು ಮೋಹಿತ–ಗೊಳಿಸುತ್ತದೆಂಬುದನ್ನು ಈ ರೀತಿ ತಿಳಿಸಿದ್ದಾರೆ.

**ಲಂಚ**

**ಲಂಚಕೊಟ್ಟವ**
**ಕೆಲಸವಾಗಿ ಸಕ್ಕರೆ ತಿಂದ**
**ಲಂಚ ಕೊಂಡವ**
**ಸಿಕ್ಕು ಬಿದ್ದು ಸಗಣಿಯ ತಿಂದ!**

(ಧ್ರುವರಾಜ ಜೋಶಿಯವರ ಚುಟುಕುಗಳು, ಪು. ೪೧)

ಲಂಚ ಕೊಡುವುದರ ಮೂಲಕ ಕೆಲಸವಾಗಿಸಿಕೊಂಡ ವ್ಯಕ್ತಿ ಖುಷಿಪಟ್ಟ. ಆದರೆ ಲಂಚ ತೆಗೆದುಕೊಂಡು ಸಿಕ್ಕಿಬಿದ್ದು ಸಗಣಿಯಂತಾದ. ಅಂದರೆ ಹೇಗೆ ವ್ಯರ್ಥವಾಯಿತು ಎಂಬುದು. ಆದರೆ ಸಗಣಿ ನಿಜವಾಗಿಯೂ ವ್ಯರ್ಥವಾದದ್ದಲ್ಲ. ಹೀಗೆ ಇದು ಲಂಚದ ಪರಿಣಾಮವನ್ನು ತಿಳಿಸುತ್ತದೆ.

**ಲಂಚಾತೀತ**

**ಕೊಲೆ, ಕಳ್ಳತನ, ದರೋಡೆ,**  
**ಅತ್ಯಾಚಾರ, ಭ್ರಷ್ಟಾಚಾರ**  
**ಯಾವ ಆರೋಪದಿಂದಾದರೂ**  
**ತಪ್ಪಿಸಿಕೊಳ್ಳಬಹುದೇನೊ,**  
**ಕೊಟ್ಟರೆ ಲಂಚ!**

(ಸಿಪಿಕೆ ಸಮಗ್ರ ಕವಿತೆ, ಪು. ೪೩೫)

ಹೀಗೆ ಡಾ. ಸಿ.ಪಿ.ಕೆ.ಯವರು ಲಂಚ ಕೊಡುವುದರ ಮೂಲಕ ಮಾಡಿದಂತಹ ತಪ್ಪಿನಿಂದ ಹೇಗೆ ತಪ್ಪಿಸಿಕೊಳ್ಳಬಹುದೆಂಬುದನ್ನು ತಿಳಿಸುತ್ತಾರೆ. ಇದು ಸಹ ಒಂದು ಕಲೆಯಿಂದ ವಿಶಿಷ್ಟತೆಯನ್ನು ಸಾರಿದೆ.

ಚುಟುಕುಗಳ ರಚನೆಯಲ್ಲಿ ಮಹಿಳೆಯೂ ಸಹ ಇದರಿಂದ ಹೊರತಾಗಿಲ್ಲ. ತಮ್ಮದೇ ಆದಂತಹ ಶೈಲಿಯಲ್ಲಿ ಚುಟುಕುಗಳನ್ನು ರಚಿಸಿದ್ದಾರೆ.

**ಮುಪ್ಪು**

**ತಲೆಗೂದಲಿಗೆ ಹಚ್ಚಿ ಕಡುಗಪ್ಪು**  
**ಆತ ಬೀಗಿದ**  
**ಇನ್ನು ತೊಲಗಿತು ಹಾಲು ಮುಪ್ಪು**  
**ಆದರದು ನಕ್ಕಿತ್ತು**  
**ನಿನ್ನಿನತೆಕ್ಕೆ ಹಾಕಿರುವೆನಲ್ಲೋ ಬೆಪ್ಪು!**

(ಬಿ.ಟಿ.ಲಲಿತಾನಾಯಕ್ ಚುಟುಕುಗಳು, ಪು. ೫೩)

ಹೀಗೆ ಲಲಿತಾನಾಯಕ್‌ರವರು ಮುಪ್ಪಿನ ಬಗ್ಗೆ ತಿಳಿಸಿದ್ದಾರೆ. ಡಾ. ಸಿ.ಪಿ.ಕೆ.ಅವರ ಚುಟುಕುಗಳ ಮತ್ತೊಂದು ವೈಶಿಷ್ಟ್ಯತೆ ಎಂದರೆ ಚುಟುಕುಗಳನ್ನು ಆವರಣದ ಚಿಹ್ನೆಯಲ್ಲಿ ಬರೆಯುವುದಾಗಿ ಇದು ಇವರ ವಿಶೇಷತೆಯನ್ನು ಸೂಚಿಸುತ್ತದೆ.

**ಸು(ಉ)ಕ್ಕು**

**ಸುಕ್ಕು ಬಂದರೆ**
**ಚಿಂತಿಯಿಲ್ಲ; ಸಹಜ**
**ಆದರೆ ತುಕ್ಕು**
**ಹಿಡಿಯಬಾರದು;**
**ಅಷ್ಟಿಷ್ಟು ಉಕ್ಕಾಗಿ**
**ಉಳಿಯಬೇಕು!** (ಕುಡಿ–ಕಿಡಿ ಹನಿಗವನಗಳು, ಪು. ೧೧)

ಸುಕ್ಕು ಬಂದರೆ ಚಿಂತೆಯಿಲ್ಲ. ಆದರೆ ಕಬ್ಬಿಣ ತುಕ್ಕು ಹಿಡಿಯದೆ ಹಾಗೆಯೇ ಕಬ್ಬಿಣವಾಗಿ ಉಳಿಯಬೇಕೆಂದು ಹೇಳುವುದರ ಮೂಲಕ ಮನುಷ್ಯನಲ್ಲಿ ಆತ್ಮವಿಶ್ವಾಸ ಕುಂದಬಾರದೆಂಬ ಸಂದೇಶವನ್ನು ನೀಡುತ್ತಾರೆ. ಆದ್ದರಿಂದಲೇ ಇವರ ಚುಟುಕು ನಯ ನಾಜೂಕಿನಂತೆ ತನ್ನ ಬೆರಗನ್ನು ಬಿಂಬಿಸುತ್ತಿರುತ್ತದೆ.

ಅರವಿಂದ ಮಾಲಗತ್ತಿಯವರು ಪ್ರೀತಿಯ ಬಗ್ಗೆ, ಅದರ ಆಳವನ್ನು ಅಳಿಯಲು ಹೋಗಿ ಸತ್ತವರಲ್ಲಿ ನಾನು ಒಬ್ಬ ಎಂದು ಹೇಳುತ್ತಾರೆ.

**ಪ್ರೀತಿಯ ಆಳವನು**
**ಅಳೆಯಲು ಹೋಗಿ**
**ಸತ್ತವರಲ್ಲಿ**
**ನಾನೂ ಒಬ್ಬ!**

(ಡಾ. ಅರವಿಂದ ಮಾಲಗತ್ತಿಯವರ ಆಯ್ದ ಚುಟುಕುಗಳು, ಪು. ೩೭)

ಡಾ. ಸಿ.ಪಿ.ಕೆ.ಯವರಿಗೆ ಪ್ರೀತಿ ಎಂದರೆ ಕಣ್ಣು ಮುಂದೆ ಬರುವವಳೇ ಹೆಣ್ಣು. ಆದ್ದರಿಂದ ಅವಳ ಪ್ರೀತಿ ಹೇಗಿರುತ್ತದೆಂಬುದನ್ನು ಇವರು ಹೀಗೆ ಹೇಳಿದ್ದಾರೆ.

**ಅಂತರ**

**ಹೆಣ್ಣು**
**ಒಲಿದರೆ ಕೊಳಲು**
**ಒಲಿಯದಿದ್ದರೆ ಬರಿಯ**
**ಬಿದಿರು, ಕೊರಡು!** (ಸಿಪಿಕೆ ಸಮಗ್ರ ಕವಿತೆ, ಪು. ೩೪೫)

ಹೇಗೆ ಪ್ರೀತಿ ಎಂಬುದು ಹೆಣ್ಣಿನಲ್ಲಿ ಹುಟ್ಟುತ್ತದೆಯೋ ಹಾಗೆಯೇ ಅದು ಬೇಗ ಸಾಯುವುದಿಲ್ಲ. ಹೀಗೆ ಹೆಣ್ಣು ಒಲಿದರೆ ಕೊಳಲಿನಂತೆ ನುಡಿಸಬಹುದು. ಆದರೆ

ಒಲಿಯದಿದ್ದರೆ ಬಿದಿರು ಎಂಬುದಾಗಿ ತಿಳಿಸಿದ್ದಾರೆ. ಹೀಗೆ ಕೊಳಲಿಗು, ಬಿದಿರಿಗೂ ಇವೆರಡರ ನಡುವಿನ ವ್ಯತ್ಯಾಸ ಅದ್ಭುತವಾಗಿ ಮೂಡಿಬಂದಿದೆ.

ಹೀಗೆ ಡಾ. ಸಿ.ಪಿ.ಕೆ.ಯವರ ಚುಟುಕು ಇತರ ಚುಟುಕುಗಳಿಗಿಂತ ವಿಭಿನ್ನವಾಗಿದೆ. ಇತರೆ ಚುಟುಕುಗಳು ಇರುಂತಹ ವಿಷಯವನ್ನು ನೇರವಾಗಿ ಹೇಳಿದರೆ, ಸಿ.ಪಿ.ಕೆ.ಯವರು ಗರ್ಭದಲ್ಲಿ ಇರುವ ಮಗುವಿನ ಹಾಗೆ ಅದರೊಳಗಿನ ಅಂತಃಸತ್ಯ ಹೊರಹೊಮ್ಮಿ ನೈಜತೆಯನ್ನು ಬಿಂಬಿಸುತ್ತದೆ. ಇದಲ್ಲದೆ ಸಿ.ಪಿ.ಕೆ.ಯವರ ಚುಟಉಕಗಳ ವಿಶಿಷ್ಟತೆಯನ್ನು ಈ ಕೆಳಗಿನ ಚಿಂತನೆಗಳ ಮೂಲಕವೂ ಸ್ಪಷ್ಟಪಡಿಸಲಾಗುತ್ತಿದೆ. ಅಲ್ಲದೆ ವಿಶ್ಲೇಷಿಸಲಾಗುತ್ತದೆ.

**ಬದುಕು:**

ಡಾ. ಸಿ.ಪಿ.ಕೆ.ಯವರು ಬದುಕಿನಲ್ಲಿನ ನೋವು-ನಲಿವು, ಸೋಲು-ಗೆಲುವು, ಆಸೆ-ನರಾಸೆ ಇಂತಹ ಯಾವುದೇ ಸರಮಾಲೆಗೆ ಅವಕಾಶವನ್ನು ಕೊಡದೆ ಧೈರ್ಯದಿಂದ ಇವುಗಳನ್ನು ಎದುರಿಸಬೇಕು ಎಂಬುದಾಗಿ ತಮ್ಮ ಚುಟುಕುವಿನ ನೆಲೆಯಲ್ಲಿ ಅದ್ಭುತವಾಗಿ ತಿಳಿಸಿದ್ದಾರೆ.

ಬದುಕುವುದು ಎಂದರೆ ಹೇಗೋ ಬದುಕುವುದಲ್ಲ, ಉಸಿರಾಡುತ್ತಾ ಅಸ್ತಿತ್ವದಲ್ಲಿರುವುದಲ್ಲ, ಸುಖ-ಶಾಂತಿಗಳಿಂದ ಬದುಕುವುದು ಸಾವನ್ನು ಗೆಲ್ಲುವುದು ಮನುಷ್ಯನಿಗೆ ಇನ್ನೂ ಸಾಧ್ಯವಾಗಿಲ್ಲ. ಬಹುಶಃ ಮುಂದೆಯೂ ಸಾಧ್ಯವಾಗುವುದಿಲ್ಲ. ಆದರೆ ಸಾಯುವತನಕವಾದರೂ ಸಾರ್ಥಕತೆಯಿಂದ ಜೀವನವನ್ನು ಸಾಗಿಸಿಕೊಮನಡು ಹೋಗಬೇಕು. ಆಗ ಮಾತ್ರ ನಮ್ಮ ಬದುಕಿಗ ಒಂದು ಬೆಲೆ ಸಿಗುತ್ತದೆ. ಆದ್ದರಿಂದಾಗಿಯೇ ಬದುಕಿನ ಬಗ್ಗೆ ಸಿ.ಪಿ.ಕೆಯವರೇ "ಅವರವರ ಬದುಕು ಅವರವರ ಕೈಯಲ್ಲಿರುತ್ತದೆ" ಎಂದು ಹೇಳಿದ್ದಾರೆ. ಹೀಗೆ "ನಮ್ಮ ಬದುಕಿಗೇ ನಾವೇ ರೂವಾರಿ" ಎಂಬುದನ್ನು ಚುಟುಕುಗಳ ಮೂಲಕ ನಿರೂಪಿಸಿದ್ದಾರೆ.[೧]

**ಬಾಳು ಏಳುಸುತ್ತಿನ**
**ಕೋಟೆಯಾಗಬಾರದು;**
**ಏಳು ಸುತ್ತಿನ ಮಲ್ಲಿಗೆಯಾಗಬೇಕು**

(ಚೋದ್ಯ-ಕುಚೋದ್ಯ)

ಹೀಗೆ ಬಾಳು ಎಂಬುದು ಮಲ್ಲಿಗೆಯ ರೀತಿಯಲ್ಲಿ ಇರಬೇಕೆಂದು ಹೇಳಿದ್ದಾರೆ.

---

೧. ಡಾ. ಸಿ.ಪಿ.ಕೆ. ಅವರ ವಿಮರ್ಶೆ ಮತ್ತು ವಿಚಾರ : ಒಂದು ಅಧ್ಯಯನ, ಪರ್ವೀನ್ ಸಲೀಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧, ಪು. ೨೦.

**ಪ್ರಯತ್ನವಿಲ್ಲದೆ**
**ಯಾವುದೂ ಆಗದು**
**ಆಗುವುದೆಂದರೆ;**
**ವಯಸ್ಸು** (ಚೋದ್ಯ-ಕುಚೋದ್ಯ)

ಪ್ರಯತ್ನದಿಂದಲೇ ಜೀವನ ಸಾಧಿಸಲು ಸಾಧ್ಯವಾಗುವುದು. ಆದರೆ ಪ್ರಯತ್ನವೇ ಇಲ್ಲದಿದ್ದರೆ ದೈಹಿಕವಾಗಿ ವಯಸ್ಸಾಗುತ್ತಿರುತ್ತದೆಂದು ಹೇಳುವುದರ ಮೂಲಕ ನಿರಂತರವಾಗಿ ಪ್ರಯತ್ನಬೇಕೆಂಬುದನ್ನು ತಿಳಿಸಿದ್ದಾರೆ.

**ಸೀಸದ ಕಡ್ಡಿ**

**(ಪೆನ್ಸಿಲ್):**
**ಒಂದು ತುದಿಯಲ್ಲಿ**
**ಬರಹ ಸಾಧನ;**
**ಇನ್ನೊಂದರಲ್ಲಿ**
**ಅಳಿಸುವ ರಬ್ಬರ್** (ಕುಡಿ-ಕಿಡಿ, ಪು. ೪)

ಇದು ಜೀವನವಾಗಿದೆ. ಸುಖ-ದುಃಖಗಳು ಬರುತ್ತಲೇ ಇರುತ್ತದೆ. ಹೀಗೆ ಅಳಿಸುವ ರಬ್ಬರ್ ಮೂಲಕ ಇದನ್ನು ಅಳಿಸುತ್ತಿರಬೇಕು. ಬರಹಗಳೆಂಬುದು ಶಾಶ್ವತವಾಗಿ ಇರಲು ಸಾಧ್ಯವಿಲ್ಲ.

ಮನುಷ್ಯ ಬದುಕಿನಲ್ಲಿ ಆಶಾವಾದದಿಂದ ಬಾಳಬೇಕೆಂಬ ಆಶಯವನ್ನು ಸಿ.ಪಿ.ಕೆ.ಯವರು ತಮ್ಮ ಚುಟುಕುಗಳಲ್ಲಿ ತಿಳಿಸಿದ್ದಾರೆ. ಅಲ್ಲದೆ ಬದುಕಿನಲ್ಲಿ ಕನಸು ಕಾಣದವರು ವಿರಳ. ಮತ್ತೆ ಕನಸು ಮತ್ತು ಬದುಕು ಒಂದಕ್ಕೊಂದು ಸಂಬಂಧವಿರುವಂತಹುದು. ಆದರೆ ಕನಸೇ ಅಂತಿಮವಲ್ಲ, ಅದರಲ್ಲೇ ಲೀನವಾಗಿ ಹೋಗಬಾರದೆಂಬ ಎಚ್ಚರಿಕೆಯನ್ನು ನೀಡಿದ್ದಾರೆ.

**ಭ್ರಮೆ**

**ಇರಲಿ, ತಪ್ಪಲ್ಲ**
**ಭ್ರಮೆಗಳು:**
**ಒಳ್ಳೆಯ ಭ್ರಮೆಗಳು**
**ಮಧುರ ಭ್ರಮೆಗಳು**
**ಬೇಡವೇ ಬೇಡ**
**ದಿಗ್ಭ್ರಮೆಗಳು!** (ಕುಡಿ-ಕಿಡಿ, ಪು. ೯೬)

ಆದ್ದರಿಂದಲೇ ಇಂತಹ ದಿಗ್ಭ್ರಮೆಗಳು ಒಳ್ಳೆಯದಲ್ಲ ಎಂಬುದಾಗಿ ಸಿ.ಪಿ.ಕೆ.ಯವರು ತಿಳಿಸಿದ್ದಾರೆ. "ಪ್ರಾಣಿಗಿಲ್ಲದ ಬುದ್ಧಿಶಕ್ತಿಯನ್ನು ಪಡೆದುಕೊಂಡಿರುವ ಮನುಷ್ಯ ಅದನ್ನು ಬೆಳೆಸಿಕೊಂಡು ಸರಿಯಾಗಿ ಉಳಿಸಿಕೊಂಡಾಗ ಮಾನವ ಜನ್ಮ ಸಾರ್ಥಕತೆಯನ್ನು ಪಡೆಯುತ್ತದೆ" ಎಂಬುದನ್ನು ಸೊಗಸಾಗಿ ಹೇಳಿದ್ದಾರೆ.

ಮನುಷ್ಯನು "ತಾನುಂಟೋ ಮೂರು ಲೋಕವುಂಟೊ ಎಂದು ಬೀಗದೆ ತಾನಿರದಿದ್ದರೂ ಲೋಕವಿರುತ್ತದೆ. ಆದರೆ ಲೋಕವಿಲ್ಲದೆ ತಾನಿಲ್ಲ ಎಂಬ ತಿಳುವಳಿಕೆ ಮನುಷ್ಯನಲ್ಲಿರಬೇಕು ಅದೇ ಜೀವನವಾಗಿದೆ. ಹೀಗೆ ಮನುಷ್ಯ ತನ್ನ ಬದುಕಿನಲ್ಲಿ ಆತ್ಮಗೌರವ, ಸ್ವಾಭಿಮಾನ, ತ್ಯಾಗ, ಆಶಾಭಾವನೆ, ಮಾನವೀಯತೆ, ಸಾಧನಶೀಲತೆ, ಮೌಲ್ಯ, ಸಹನೆ, ಸಂವೇದನೆ, ಎಚ್ಚರಿಕೆ ಇವೇ ಮುಂತಾದ ಗುಣಗಳನ್ನು ಮನುಷ್ಯನು ಹೊಂದಿರುವುದರಿಂದ ಉತ್ತಮ ವ್ಯಕ್ತಿತ್ವವನ್ನು ಹೊಂದಬಹುದಾಗಿದೆ. ಆದ್ದರಿಂದಾಗಿ ಸಿ.ಪಿ.ಕೆ. ಅವರ ಚುಟುಕುಗಳಲ್ಲಿ ಈ ಎಲ್ಲಾ ಅಂಶಗಳು ವ್ಯಕ್ತವಾಗಿದೆ.

**ಪ್ರೀತಿ, ಪ್ರೇಮ**

ನಶ್ವರವಾದಂತಹ ಚೆಲುವಿನಿಂದ ಹುಟ್ಟುವ ಒಲವು ತಾತ್ಕಾಲಿಕವಾದುದರಿಂದ ಒಲವಿನಿಂದ ಚೆಲುವು ಸಿದ್ಧವಾದಾಗ ಮಾತ್ರ ಆ ಒಲವು ಶಾಶ್ವತೆಯನ್ನು ಪಡೆಯುತ್ತದೆಂಬುದನ್ನು ಹೇಳುವುದರ ಮೂಲಕ ಪ್ರೀತಿಯ ಪ್ರಾಮುಖ್ಯತೆಯನ್ನು ಸಿ.ಪಿ.ಕೆ.ಯವರು ಉತ್ತಮವಾಗಿ ತಿಳಿಸಿದ್ದಾರೆ.

**ಪ್ರೀತಿ**

**ಸಾಕ್ಷಾತ್ಕಾರದ**
**'ಪದಾರ್ಥ'**
**ಪ್ರೀತಿ;**
**ಬಲಾತ್ಕಾರದ**
**ವಸ್ತುವಲ್ಲ!** **(ಕುಡಿ–ಕಿಡಿ, ಪು. ೮೮)**

ಹಗೆತನ, ಸೇಡು ಇದು ಯಾವಾಗಲೂ ಒಂದು ವಿಷವೃತ್ತವಾಗಿದೆ. ದ್ವೇಷ ಸಾಧಿಸುತ್ತ ಜೀವನ ನಡೆಸಿಕೊಂಡು ಹೋಗುವುದು ವ್ಯರ್ಥವಾಗಿದೆ. ಆದ್ದರಿಂದಲೇ ದ್ವೇಷಕ್ಕಿಂತ ಪ್ರೀತಿ ಉತ್ತಮವಾದುದಾಗಿದೆ. ಹೀಗೆ ಪ್ರೀತಿ ಬದುಕಿನ ನಾವೆಗೆ, ಪ್ರೀತಿಯೇ ಹಾಯಿ, ಅದಿಲ್ಲವೋ ಸಾಯಿ! ಎಂದು ಪ್ರೀತಿಯ ಬಗೆಗೆ ಸಿ.ಪಿ.ಕೆ. ತಮ್ಮ ಅಭಿಪ್ರಾಯವನ್ನು ಚುಟುಕಿನ ಮೂಲಕ ವ್ಯಕ್ತಪಡಿಸಿದ್ದಾರೆ.

**ಸುಖ-ದುಃಖಗಳು**

ಸುಖ-ದುಃಖಗಳೆಂಬುದು ಒಂದೇ ನಾಣ್ಯದ ಎರಡು ಮುಖಗಳು. ಇವೆರಡೂ ಅವಶ್ಯಕ ಮತ್ತು ಅನಿವಾರ್ಯವೂ ಆಗಿದೆ. ಸುಖ-ದುಃಖಗಳ ಸಮ್ಮಿಶ್ರಣದಿಂದಲೇ ಬದುಕಿಗೆ ಒಂದು ಅರ್ಥವೂ ದೊರೆಯುತ್ತದೆ. ಆದ್ದರಿಂದಾಗಿ 'ತೃಪ್ತಿಯೇ ಸುಖ, ಅತೃಪ್ತಿಯೇ ದುಃಖ' ಎಂದು ಹೇಳಬಹುದಾಗಿದೆ.

ಸುಖ-ದುಃಖಗಳು ಒಂದನ್ನೊಂದು ತ್ಯಜಿಸಿ ಇರಲು ಸಾಧ್ಯವಿಲ್ಲ. ಒಂದಕ್ಕೆ ಮತ್ತೊಂದು ಪೂರಕವಾಗಿ ತನ್ನ ಕೆಲಸ ಕಾರ್ಯಗಳನ್ನು ಮಾಡುತ್ತಾ ಹೋಗುತ್ತದೆ. ಆದರೆ ಎರಡೂ ಬೇಕಾಗಿದೆ. ಕೇವಲ ಸುಖವೇ ಬೇಕೆಂಬುದು ಮೂರ್ಖತನ. ದುಃಖವಿದ್ದಾಗಲೇ ಸುಖದ ಬೆಲೆ ಏನೆಂಬುದು ತಿಳಿಯುತ್ತದೆ. ಇಲ್ಲದಿದ್ದರೆ ಇದರ ಬೆಲೆ ಏನೆಂಬುದು ತಿಳಿಯುವುದಿಲ್ಲ.

**ನೋವು-ನಲಿವು**

**ನಗುವಿನ ಹಿಮದೆ**
**ನೋವಿರಬಹುದು;**
**ಅಳುವಿನ ಹಿಂದೆ**
**ನಲಿವಿರಲಾರದು!**
**ಸಂಸಾರ:** (ಅಹನ್ಯ ಹನಿ, ಪು. ೪೦)

**ಸಂಸಾರ**

ಡಾ. ಸಿ.ಪಿ.ಕೆ.ಯವರು ಮದುವೆ, ಸಂಸಾರ ಹಾಗೂ ಗೃಹಿಣಿಯ ಜವಾಬ್ದಾರಿಯ ಬಗೆಗೆ ತಮ್ಮದೇ ಆದ ನಿಲುವನ್ನು ಇಟ್ಟುಕೊಂಡಿರುವಂತಹವರು. ಮನುಕುಲದ ಇತಿಹಾಸದಲ್ಲಿ ಪ್ರಾಚೀನವಾದ ವಿವಾಹ ಸಂಸ್ಥೆ ಇಂದು ಹಿಂದಿನ ಸ್ಥಿತಿಯಲ್ಲಿ ಉಳಿಯದೆ ಈ ಹೊತ್ತು ದಾಂಪತ್ಯ ಜೀವನದ ಕಟ್ಟಡದ ಇಟ್ಟಿಗೆಗಳು ಸಡಿಲವಾಗುತ್ತಿರುವ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿದ್ದಾರೆ.[೧]

ಸಂಸಾರವೆಂಬುದು – ಮೋಹಕ ಮಾಯಾವಿಲಾಸ. ಇದನ್ನು ನಮ್ಮ ಅಡಿಯಾಳಾಗಿ ಇಟ್ಟುಕೊಳ್ಳಬೇಕೆ ವಿನಃ ಅರಸನನ್ನಾಗಿ ಮಾಡಿಕೊಳ್ಳಬಾರದು. ಸಂಸಾರವನ್ನು ಕೆಲವರು ಒಲ್ಲೆ ಎಂದು ಹೇಳಿಕೊಳ್ಳುತ್ತಾರೆ. ಆದರೆ ಮತ್ತೆ ಕೆಲವರು ಇಷ್ಟಪಟ್ಟು ಅದನ್ನು ಸ್ವೀಕರಿಸುತ್ತಾರೆ. ಆದ್ದರಿಂದಲೇ ಸಂಸಾರವೆಂಬುದು ಕೆಲವರಿಗೆ ಸಿಹಿಯಾದರೆ ಮತ್ತೆ ಕೆಲವರ ಪಾಲಿಗೆ ಅದು ಕಹಿಯಾಗಿರುತ್ತದೆ.

---

೧. ಡಾ. ಸಿ.ಪಿ.ಕೆ. ಅವರ ವಿಮರ್ಶೆ ಮತ್ತು ವಿಚಾರ : ಒಂದು ಅಧ್ಯಯನ, ಡಾ. ಪರ್ವೀನ್ ಸಲೀಂ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೨೦೧೧, ಪು. ೨೬.

ಗುರಿ
ಗಂಡಿನ ಗುರಿ
ಕಾಮದ ಏಕತಾನ;
ಹೆಣ್ಣಿನದು ಪ್ರೇಮ; ಸಂತಾನ"          (ಚಕ್ಕೆ ಚೂರು)

ಇದೇ ಇವರಿಬ್ಬರ ಗುರಿಯಾಗಿದೆ. ಅಲ್ಲದೆ ಇವರಿಬ್ಬರ ನಡುವಿನ ವ್ಯತ್ಯಾಸವನ್ನು ಈ ಕೆಳಗಿನ ಚುಟುಕು ತಿಳಿಸುತ್ತದೆ.

ವ್ಯತ್ಯಾಸ
ಗಂಡಿನ ಕಂಬನಿ
ಮೂಡಿದಲ್ಲಿ ಇಂಗುತ್ತದೆ
ಹೆಣ್ಣಿನದು
ಉಕ್ಕಿ ಹರಿಯುತ್ತದೆ.          (ಚಕ್ಕೆ ಚೂರು)

ಕಣ್ಣೀರೆ ದುಃಖದ ಇಳಿಕೆಗೆ ಇರುವಂತಹ ಒಂದು ಅಸ್ತ್ರವಾಗಿದೆ. ಹೀಗೆ ಇವರಿಬ್ಬರ ಸಮ್ಮಿಲನದಿಂದ ಸಂಸಾರ ತೂಗಿಕೊಂಡು ಹೋಗುತ್ತದೆ. ಒಬ್ಬ ಪುರುಷನ ಜೀವನದ ಸಾರ್ಥಕತೆಯಾಗುವುದೇ ಗೃಹಿಣಿಯು ಗುಣಸಂಪನ್ನಳಾಗಿದ್ದಾಗ ಮಾತ್ರ. ಇಲ್ಲವೆಂದರೆ ಖಂಡಿತಾ ಇದನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದಾಗಿಯೇ ಸಂಸಾರವೆಂಬ ಹಡಗನ್ನು ನಡೆಸಲು ಹೆಣ್ಣೂ ಬೇಕು ಗಂಡು ಬೇಕು. ಇವರಿಬ್ಬರಲ್ಲಿ ಬಿರುಗಾಳಿ ಬಂದರೆ ಇಡೀ ಸಂಸಾರವೇ ಮುಳುಗಿಹೋಗುತ್ತದೆ.

**ಶಿಕ್ಷಣ**

ಡಾ. ಸಿ.ಪಿ.ಕೆ.ಯವರು ವಿಷಯ ಸಂಗ್ರಹವಾಗಲಿ, ಕೇವಲ ಮಾಹಿತಿಗಳ ಮೊತ್ತವನ್ನಾಗಲಿ ವಿದ್ಯೆಯೆಂದು ಒಪ್ಪದ ಸಿಪಿಕೆಯವರು ವಿದ್ಯೆಯೆಂಬುದು ಆತ್ಮ ಸಂಸ್ಕಾರ, ಮನ ಪರಿಪಾಕ, ಚಿತ್ತದ ಆರ್ದ್ರತೆ ಎಂಬುದಾಗಿ ಕರೆದಿದ್ದಾರೆ. ಸಾಕ್ಷರತೆ ವಿದ್ಯೆಯೆಂಬ ಸಾಂಪ್ರದಾಯಿಕವಾದ ಅಂಗೀಕಾರವನ್ನು ನಿರಾಕರಿಸುತ್ತಾ "ಮನುಷ್ಯನಲ್ಲಿರುವ ಪಾಶವೇ ಪ್ರೌವೃತ್ತಿಗಳನ್ನು ಅಳಿಸಿ, ಅವನ ಹೃದಯವನ್ನುಪರಿಷ್ಕರಿಸಿ, ಸಂಸ್ಕರಿಸಿ ಮಾನವೀಯತೆಯನ್ನು ಪ್ರತಿಷ್ಠಾಪಿಸತಕ್ಕದ್ದು ನಿಜವಾದ ವಿದ್ಯೆ" ಎಂದಿದ್ದಾರೆ. "ಕೇವಲ ಹೊಟ್ಟೆಪಾಡಿಗಾಗಿ ಕಲಿಯುವ ಓದು ಬರಹವಷ್ಟೇ ವಿದ್ಯೆಯಾಗದೆ ಅಂತಹ ಸಾಕ್ಷರತೆಯಿಂದ ಒಳಿತಾಗುವುದರ ಬದಲು ಅಪಾಯವೇ ಆಗಬಹುದು" ಎಂದು ಎಚ್ಚರಿಸಿದ್ದಾರೆ.[೧] ಆದ್ದರಿಂದಾಗಿಯೆ ಜನರೆಲ್ಲ ಓದು

---

೧. ಡಾ. ಸಿ.ಪಿ.ಕೆ. ಅವರ ವಿಮರ್ಶೆ ಮತ್ತು ವಿಚಾರ : ಒಂದು ಅಧ್ಯಯನ, ಡಾ. ಪರ್ವೀನ್ ಸಲೀಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧, ಪು. ೨೮.

ಬರಹ ಬಲ್ಲವರಾಗಿ ಪುಸ್ತಕಗಳ ಪ್ರಯೋಜನ ಪಡೆಯುವ ತನಕ ಯಾವ ಚಳುವಳಿಯೂ ಜಯ ಗಳಿಸುವುದಿಲ್ಲ ಎಂದು ತಿಳಿಸಿದ್ದಾರೆ.

**ಗುರಿ**

**ದಾರಿ**
**ಗುರಿಗೊಯ್ಯುವುದು**
**ಹಾಗಿರಲಿ,**
**ಗುರಿಯೆ ದಾರಿಯನ್ನು**
**ನಿರ್ಮಿಸಬಹುದು!** (ಕುಡಿ–ಕಿಡಿ, ಪು. ೬೫)

ಮನುಷ್ಯನ ಒಳಗಿನ ಅಂಧತ್ವಕ್ಕೆ ಅಜ್ಞಾನವೂ ಒಂದು ಕಾರಣವಾಗಿದೆ. ಅದನ್ನು ನಿವಾರಿಸುವಂತೆ ಕರೆಕೊಡುತ್ತಾ ಅಂತರಂಗದ ಅಂಧತೆಯಿಂದಾದ ದುಷ್ಪರಿಣಾಮಗಳಿಗೆ "ತಕ್ಕ ಗುರು–ಗುರಿ" ಎರಡೂ ಇಲ್ಲದ ಇಂದಿನ ನಮ್ಮ ಸಮಾಜದ ಸ್ಥಿತಿಗತಿಗಳನ್ನು ಲಕ್ಷಿಸಿದರೆ ಒಳಗುರುತು ಸಾಮೂಹಿಕವಾಗಿ ಸಾಂಕ್ರಾಮಿಕವಾಗಿ ಹಬ್ಬುತ್ತಿರುವಂತೆ ತೋರುತ್ತದೆ ಎಂಬ ಆತಂಕವನ್ನು ವ್ಯಕ್ತಪಡಿಸುತ್ತಾ ಗುರಿ ದಾರಿಯನ್ನು ನಿರ್ಮಿಸಿಕೊಡುತ್ತದೆಂದು ತಿಳಿಸಿದ್ದಾರೆ.

**ವೈರಿ**

**ಇಂಗ್ಲೀಷ್ ಭಾಷೆ**
**ನಮ್ಮ ವೈರಿಯಲ್ಲ;**
**ಅದರ ಬಗೆಗಿನ**
**ವ್ಯಾಮೋಹ ವೈರಿ!** (ಕುಡಿ–ಕಿಡಿ, ಪು. ೧೯)

ಆದ್ದರಿಂದಲೇ ಯಾವುದೇ ಭಾಷೆಯ ಬಗ್ಗೆ ವ್ಯಾಮೋಹ ತಳೆಯುವುದು ಉತ್ತಮವಾದುದಲ್ಲ ಅದು ನಮ್ಮ ವೈರಿಯಾಗಿದೆ.

ಹೀಗೆ ಶಿಕ್ಷಣದ ಬಗೆಗಿನ ಇವರ ಕಲ್ಪನೆ ಉತ್ತಮವಾದುದಾಗಿದೆ. ಈವತ್ತಿನ ಶಿಕ್ಷಣದಲ್ಲಿನ ವ್ಯವಸ್ಥೆಯ ಬಗ್ಗೆ ಹೇಳುವುದರ ಮೂಲಕ ತಮ್ಮದೇ ಆದ ನಿಲುವನ್ನು ವ್ಯಕ್ತಪಡಿಸಿದ್ದಾರೆ.

**ಸಾವು:**

'ದುಃಖವೇ ಸಾವು; ನೋವೇ ಸಾವು' ಎಂದು ವಿಸ್ಮಯ, ಭಯ ಎರಡನ್ನೂ ಜೋಡಿಸತಕ್ಕ ಸಾವನ್ನು ಹುಟ್ಟಿನಂತೆ ಆಕಸ್ಮಿಕ ಎಂದು ಸಿ.ಪಿ.ಕೆ.ಯವರೇ ತಿಳಿಸಿದ್ದಾರೆ. ಸಾವು

ಎಂಬುದು ಹಾಗೆ ವಾಸ್ತವಿಕವಾಗಿ ಹುಟ್ಟಿದಾಗಲೇ ಜೀವಿಯನ್ನು ಸಾವು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ.[೧]

ಸಾವಿನ ಬಗ್ಗೆ ಸಿ.ಪಿ.ಕೆ.ಯವರು ಅದ್ಭುತವಾದಂತಹ ಮಾತನ್ನು ಹೇಳಿದ್ದಾರೆ. 'ಮರಣವೇ ಇರದಿದ್ದ ಪಕ್ಷದ್ದಲಿ ಬದುಕು ಸಮಸ್ಯಾತ್ಮಕವೂ, ನೀರಸವೂ, ಯಾಂತ್ರಿಕರವೂ ಎಷ್ಟೇ ಜನರ ಪಾಲಿಗೆ ಅಸಹನೀಯವೂ ಆಗಬಹುದಿತ್ತು. ಬದುಕಿನಲ್ಲಿ ಎಂತೆಂತಹ ನೋವುಗಳಿವೆ ಎಂದರೆ, ಅವುಗಳಿಗೆ ತುತ್ತಾದವರ ಪಾಲಿಗೆ ಸಾವು ಸಾಮಾನ್ಯಾರ್ಥದಲ್ಲಿ ಸೌಖ್ಯದ ಬಾಗಿಲನ್ನು ತೆರೆಯುತ್ತದೆ". ಒಟ್ಟಿನಲ್ಲಿ ಅನಿವಾರ್ಯವಾದ ಸಾವಿನಿಂದಲೇ ಬದುಕಿಗೆ ಮೌಲ್ಯ, ಮಹತ್ವ ಎನ್ನುವ ಅವರ ಮಾತನ್ನು ನಿರಾಕರಿಸುವಂತಿಲ್ಲ.

**ಸಾವು–ಬದುಕು**

**ಸಾವು ತಾಯಿ;**
**ಬದುಕು ಪ್ರೇಯಸಿ,**
**ಇಲ್ಲವೆ**
**ಪತ್ನಿ** (ಅಹನ್ಯ ಹನಿ, ಪು. ೧೩)

ಹೀಗೆ ಸಾವು–ಬದುಕಿನೊಡನೆ ಇರುವ ಅನ್ಯೋನತೆಯನ್ನು ಇದು ತಿಳಿಸುತ್ತಾ ಹೋಗುತ್ತದೆ.

**ಹುಟ್ಟು–ಸಾವು**

**ನಮ್ಮ ಹುಟ್ಟು ಹಿಂಸೆಯಲ್ಲಿ**
**ರಕ್ತಕ್ರಾಂತಿಯಲ್ಲಿ; ಅನಿವಾರ್ಯ;**
**ಆದರೆ ಶಾಂತಿಯಲ್ಲಿ ಸಾಯುವುದು**
**ಅಪೇಕ್ಷಣೀಯ** (ಸಿಪಿಕೆ ಸಮಗ್ರಕವಿತೆ, ಪು. ೪೭೦)

ಹೀಗೆ ಹುಟ್ಟು ಚಿತ್ರಹಿಂಸೆಯಲ್ಲಿಯೇ ಆದರು ಶಾಂತಿಯ ರೀತಿಯಲ್ಲಿ ಸಾಯುವುದು ಉತ್ತಮವಾದುದಾಗಿದೆ.

**ಕರ್ತವ್ಯ**

**ಸಾವು ನಿಶ್ಯಬ್ಧವಾಗಿ**
**ನಿರಂತರವಾಗಿ**
**ಕೆಲಸ ಮಾಡಬೇಕು,**
**ಸಾವಿನ ಹಾಗೆ!** (ಸಿಪಿಕೆ ಸಮಗ್ರಕವಿತೆ, ಪು. ೨೧೭)

---

೧. ಡಾ. ಸಿ.ಪಿ.ಕೆ. ಅವರ ವಿಮರ್ಶೆ ಮತ್ತು ವಿಚಾರ : ಒಂದು ಅಧ್ಯಯನ, ಡಾ. ಪರ್ವೀನ್ ಸಲೀಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧, ಪು. ೩೧.

ಹೀಗೆ ಸಾವು ನಿಶ್ಯಬ್ಧದ ರೀತಿಯಲ್ಲಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತದೆ. ಹೀಗೆ ಸಿ.ಪಿ.ಕೆ.ಯವರು ಚುಟುಕುಗಳಲ್ಲಿ ಬದುಕನ್ನು ಪ್ರೀತಿಸಿದರೆ ಸಾವನ್ನೂ ಪ್ರೀತಿಸಿದಂತೆ, ಮತ್ತೆ ಸಾವು ಮತ್ತು ಬದುಕು ಅವಿನಾಭಾವ ಸಂಬಂಧವನ್ನು ಹೊಂದಿದೆ.

**ದೇವರು, ಧರ್ಮ, ಜಾತಿ, ಮೌಢ್ಯ**

ಡಾ. ಸಿ.ಪಿ.ಕೆ.ಯವರು 'ಧರ್ಮ' ಇಂದು ಜಾತಿ ಮತಗಳಿಗೆ ಪರ್ಯಾಯವಾಗಿ ಪರಿಣಮಿಸಿರುವ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿದ್ದಾರೆ. "ಜಾತಿ ಪದ್ಧತಿಯಿಂದಾಗಿ ನಮ್ಮ ದೇಶಕ್ಕಂಟಿದ ಘೋರ ಶಾಪವಾಗಿದೆ. ಎಷ್ಟೋ ವಿಷಯಗಳಲ್ಲಿ ಧವಳವಾದ ನಮ್ಮ ಪರಂಪರೆಗೆ ಹತ್ತಿದ ಕಪ್ಪು ಕಲೆಯಾಗಿದೆ. ಭಾರತದಲ್ಲಿ ಜಾತೀಯತೆ ಎನ್ನುವುದು ಗುಂಪುಗಾರಿಕೆಯ ಮೂಲವಾಗಿದೆ ಮತ್ತು ಕೆಟ್ಟದೆನಿಸಿಕೊಂಡಿದೆ ಎನ್ನುವ ಸಿ.ಪಿ.ಕೆ.ಯವರು ತಮ್ಮ ಜಾತಿಯನ್ನು ಸ್ವಾರ್ಥಕ್ಕಾಗಿ ಬಳಸುವುದರ ಬಗ್ಗೆ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ.

**ದೈವ**

**ಜಗತ್ತಿನಲ್ಲಿ ಎಷ್ಟು**
**ವ್ಯಕ್ತಿಗಳೋ ಅಷ್ಟು**
**ದೈವಗಳು!**
**(ಅವರಿಗೆ ತಿಳಿದಿರಲಿ, ಇಲ್ಲದಿರಲಿ)** (ಕುಡಿ–ಕಿಡಿ)

ದೇವರುಗಳ ಸಂಖ್ಯೆ ಜಗತ್ತಿನಲ್ಲಿರುವ ಮನುಷ್ಯರ ಸಂಖ್ಯೆಗೆ ಹೋಲಿಸಲಾಗಿದೆ. ಅಂದರೆ ನಮ್ಮ ದೇಶದಲ್ಲಿ ಹೆಚ್ಚಾಗಿ ದೇವರನ್ನು ಆರಾದಿಸುತ್ತಾರೆ. ಆದರೆ ಅವರಿಂದ ಏನು ಫಲ, ದೇವನೊಬ್ಬನೆ ನಾಮ ಹಲವಾಗಿದೆ. ಅದರಲ್ಲೂ ಸಿ.ಪಿ.ಕೆ.ಯವರು ಆವರಣ ಚಿಹ್ನೆಯನ್ನು ತಮ್ಮ ಚುಟುಕುಗಳಲ್ಲಿ ರಚಿಸಿದ್ದಾರೆ. ಹೆಚ್ಚಾಗಿ ಈ ಚಿಹ್ನೆಯನ್ನು ಬಳಸಿಕೊಂಡಿದ್ದಾರೆ. ಆದ್ದರಿಂದಾಗಿಯೇ ಅವರಿಗೆ ತಿಳಿದಿರಲಿ, ಇಲ್ಲದಿರಲಿ ಎಂದು ವಿಡಂಬನೆಯನ್ನು ಸಹ ಇವರು ಹೇಳಿರುವುದು ವೈಶಿಷ್ಟ್ಯವೆನಿಸಿದೆ.

**ಜಾತಿ**

**"ಮನುಷ್ಯ ಜಾತಿ ತಾನೊಂದೆ ವಲಂ"**
**ದಿಟವೆ? ವಾಸ್ತವವಾಗಿ**
**ಎರಡು ಜಾತಿ**
**(ಪರಸ್ಪರ ವಿರುದ್ಧವಾಗಿ)**
**ಗಂಡು ಮತ್ತು ಹೆಣ್ಣು!** (ಕುಡಿ–ಕಿಡಿ)

ಪಂಪನು ಅಂದು ಹೇಳಿದ ಈ ಮಾತನ್ನು ಸಿ.ಪಿ.ಕೆ.ಯವರು ಹೀಗೆ ಹೇಳುತ್ತಾರೆ. ಒಂದೇ ಜಾತಿ ಎಂದು ಪಂಪ ಹೇಳಿದರೆ ಆವರಣ ಚಿಹ್ನೆಯಲ್ಲಿ ಹೇಳಿರುವಾಗೆ ಎರಡು ಜಾತಿಗಳುಇವೆ. ಒಂದುಗಂಡು, ಒಂದು ಹೆಣ್ಣು. ಆದ್ದರಿಂದಲೇ ಜನರು ಜಾತಿ ಜಾತಿ ಎಂದು ಇಂದಿಗೂ ಈ ಜಾತಿಯ ಪಿಡುಗಿನಲ್ಲಿ ತೊಡಗಿದ್ದಾರೆ. ಹೀಗೆ ಜನರು ಜಾತಿ ಧರ್ಮ ಇವುಗಳು ಯಾವುದು ಶಾಶ್ವತವಾಗಿದೆ. ಹುಟ್ಟಿನಿಂದ ಸಾಯುವತನಕ ಮನುಷ್ಯ ಈ ಜಂಜಾಟದಲ್ಲಿಯೇ ಸಾವನ್ನಪ್ಪುತ್ತಾನೆ.

ದೇವಾಲಯಗಳು ಶಾಂತಿಯ ಪ್ರತೀಕ. ಆದರೆ ಇಂದು ದೇವಾಲಯಗಳಲ್ಲಿ ನಡೆಯುತ್ತಿರುವ ಅನ್ಯಾಯವನ್ನು ದೇವರ ಹೆಸರಿನಲ್ಲಿ ಮಾಡುತ್ತಿರುವ ಮೋಸ, ವಂಚನೆಯನ್ನು ಟೀಕಿಸಿದ್ದಾರೆ. ದೇವಾಲಯಗಳು ಜನರನ್ನು ನಂಬಿಕೆಗಳ ಮೂಲಕ ಅವರನ್ನು ಮೌಢ್ಯರನ್ನಾಗಿಸುವುದು ಇಂದು ದೇವಾಲಯಗಳಲ್ಲಿ ನಡೆಯುತ್ತಿರುವ ದುರ್ಘಟನೆಯಾಗಿದೆ. ಆದ್ದರಿಂದಾಗಿಯೇ ದೇವರು ಧರ್ಮ ಜಾತಿಯಂತಹ ಮೌಢ್ಯತೆಗಳನ್ನು ಹೊಂದಿರುವ ಜನರು ತಮ್ಮಲ್ಲಿರುವ ಈ ಭೂತವನ್ನು ಹೋಗಲಾಡಿಸಿಕೊಳ್ಳಬೇಕಾಗುತ್ತದೆ. ಹೋಗಲಾಡಿಸಿಕೊಳ್ಳದಿದ್ದರೆ ಇದು ನಿರಂತರವಾಗಿ ನಡೆದು ಇದೇ ಗುಂಗಿನಲ್ಲಿ ಮರಣವನ್ನು ಹೊಂದುತ್ತಾರೆ. ಆದ್ದರಿಂದಾಗಿಯೇ ಧರ್ಮ, ಜಾತಿ, ದೇವರೆಂಬ ಮೌಢ್ಯತೆ ಹೋಗಲಾಡಿಸಿಕೊಳ್ಳಬೇಕೆಂಬ ಸಂದೇಶವನ್ನು ಇವರು ನೀಡಿದ್ದಾರೆ.

**ಮಾತು**

ಮಾತು ಬೆಳ್ಳಿ, ಮೌನ ಬಂಗಾರವಾಗಿದೆ. ಪ್ರತಿಯೊಬ್ಬ ಮನುಷ್ಯನು ತನ್ನ ಭಾವನೆಯನ್ನು ಮಾತಿನ ಮೂಲಕ ವ್ಯಕ್ತಪಡಿಸಿರುತ್ತಾನೆ. ಮಾತು ಇಲ್ಲದಿದ್ದರೆ ಮನುಷ್ಯನ ಬದುಕು ಅಪೂರ್ಣವಾದಂತೆ ತೋರುತ್ತದೆ. ಮಾತು ಹಿತ-ಮಿತವಾಗಿ ಕೂಡಿರಬೇಕು.

**ಮಾತು-ಮೌನ**

**ಕೆಲವರು ಮಾತನ್ನು**
**ಮೌನವಾಗಿಸುತ್ತಾರೆ;**
**ಮತ್ತೆ ಕೆಲವರು**
**ಮೌನವನ್ನೂ**
**ಮಾತನಾಡಿಸುತ್ತಾರೆ!** (ಅಹನ್ಯ-ಹನಿ, ಪು. ೬೬)

ಆದ್ದರಿಂದಲೇ ಮಾತು-ಮೌನಗಳು ಉತ್ತಮ ವಾಹಕಗಳಾಗಿದ್ದು ಮಾತಿನಲ್ಲಿ ಮೌನವನ್ನು, ಮೌನದಲ್ಲಿ ಮಾತನ್ನು ಗುರ್ತಿಸಲಾಗುತ್ತದೆ. ಆದ್ದರಿಂದಲೇ

**ಮಾತು**

**ಮಾತು ಮನೆಕೆಡಿಸಿತು!"**
**ಎಂಬುದು ಗಾದೆ;**
**ಮೂಲತಃ ಅದು**
**ಮನುಷ್ಯನನ್ನೇ ಕೆಡಿಸಿತು!** (ಅಹನ್ಯ-ಹನಿ, ಪು. ೬೬)

ಹೀಗೆ ಮಾತಿನಿಂದ ಮನೆಕೆಡುತ್ತದೆ. ಹಾಗೆಯೇ ಮನುಷ್ಯನನ್ನು ಸಹ ಅದು ಹಾಳುಮಾಡುತ್ತದೆ. ನಾಲಿಗೆಗೆ ಮೂಳೆಯಿಲ್ಲವೆಂದು ಬಾಯಿಗೆ ಬಂದ ಹಾಗೆ ಮಾತನಾಡಬಾರದು. ಅದು ವ್ಯಕ್ತಿಯ ಶ್ರೇಯಸ್ಸಿಗೆ ಉತ್ತಮವಾದುದಲ್ಲವಾಗಿದೆ. ಆದ್ದರಿಂದಾಗಿ ಅಡಿಕೆಗೆ ಹೋದ ಮಾನ ಆನೆಕೊಟ್ಟರೂ ಬಾರದು ಎಂಬ ಹಾಗೆ ಆಡಿದ ಮಾತು, ಒಡೆದ ಮುತ್ತು ಯಾವತ್ತು ವಾಪಸ್ಸಾಗುವುದಿಲ್ಲ. ಆದ್ದರಿಂದ ಮಾತನ್ನು ತುಂಬಾ ಜಾಗರೂಕತೆಯಿಂದ ಆಡಬೇಕಾಗಿದೆ. ಹೀಗೆ ಇವೇ ಮೊದಲಾದ ಅಂಶಗಳ ಮೂಲಕ ಮಾತಿನ ಮಹತ್ವವನ್ನು ಎತ್ತಿಹಿಡಿದಿದ್ದಾರೆ.

**ಪರಿಸರ**

'ಪರಿಸರ ರಕ್ಷಣೆ' ನಮ್ಮ ನಿಮ್ಮೆಲ್ಲರ ಹೊಣೆಯೂ ಆಗಿದೆ. ಆದರೆ ಮನುಷ್ಯ ಸ್ವಾರ್ಥತನಕ್ಕಾಗಿ ಇಡೀ ಪರಿಸರವನ್ನೇ ನಾಶ ಮಾಡುತ್ತಿದ್ದಾನೆ. ಆದರೆ ಇವರಿಂದ ಮನುಷ್ಯನ ಉಳಿಗಾಲವಿದೆಯೋ ಖಂಡಿತಾ ಇಲ್ಲ. ಇದರ ಅಳಿವಿನೊಂದಿಗೆ ತನ್ನ ವಿನಾಶವನ್ನು ಕಾಣುವುದರಲ್ಲಿ ಯಾವುದೇ ರೀತಿಯಾದಂತಹ ಸಂಶಯವಿಲ್ಲ. ಆದ್ದರಿಂದಾಗಿ ಪರಿಸರವನ್ನು ರಕ್ಷಿಸಬೇಕು.

ವರ್ಡ್ಸ್‌ವರ್ತ್ 'ತನ್ನನ್ನು ಪ್ರೀತಿಸಿದವನನ್ನು ಪ್ರಕೃತಿ ಎಂದೂ ಕೈಬಿಟ್ಟಿಲ್ಲ' ಎಂಬ ವಾಕ್ಯವನ್ನು ಖಂಡಿತವಾಗಿಯೂ ಸಾಯುವ ತನಕ ನೆನಪಿಸಿಕೊಳ್ಳಬೇಕಾಗುತ್ತದೆ. ಏಕೆಂದರೆ ಪ್ರಕೃತಿಯನ್ನು ಪ್ರೀತಿಸಿದರೆ ಅದು ನಮ್ಮನ್ನು ಪ್ರೀತಿಸುತ್ತದೆ. ಅದೇ ದ್ವೇಷಿಸಿದರೆ ಅದೂ ನಮ್ಮನ್ನು ದ್ವೇಷಿಸುತ್ತದೆಂಬುದಾಗಿ ಹೇಳಲಾಗುತ್ತದೆ.

**ಹಸುರು**

**ಕೆರೆಗಳ ಸುತ್ತ ಹಸುರಿರಬೇಕು;**
**ದುರ್ದೈವವೆಂದರೆ**
**ಈಗ ಹಸುರಿದೆ**
**ಹಲವು ಕೆರೆಗಳ ನಡುವೆ!** (ಸಿಪಿಕೆ ಸಮಗ್ರ ಕವಿತೆ, ಪು. ೩೨೪)

ಹಿಂದೆ ಹಸುರು ಎಂದರೆ ಜೀವವಾಗಿತ್ತು. ಈಗ ಎಲ್ಲೆಲ್ಲೂ ಹಸುರನ್ನು ನೋಡುವ ಬದಲು ಕಟ್ಟಡಗಳನ್ನೇ ಕಾಣುತ್ತಿದ್ದೇವೆ. ಒಟ್ಟಿನಲ್ಲಿ ಹಸುರು ಎಂಬುದು ಉಸಿರು ಅದು ಉಳಿದರೆ ನಾಡು ಇಲ್ಲದಿದ್ದರೆ ಅದೇ ಸ್ಮಶಾನವಾಗುತ್ತದೆ.

**ಸಾಧ್ಯ**

**ಇರುವುದೊಂದೇ ಭೂಮಿ;**
**ಇರುವುದೊಂದೇ ಸೂರ್ಯ!**
**ಸೂರ್ಯಕ್ರಮೇಣ ತಣ್ಣಗಾಗುತ್ತಿದ್ದಾನಂತೆ:**
**ತಪ್ಪಿಸಲು ನಾವೇನು ಮಾಡಬಹುದು?**
**ಆದರೆ ಮನಸ್ಸು ಮಾಡಿದರೆ**
**ಭೂಮಿಯನ್ನುಳಿಸಿಕೊಳ್ಳಬಹುದು!** (ಚೋದ್ಯ-ಕುಚೋದ್ಯ, ಪು. ೩೬೬)

ಹೀಗೆ ಭೂಮಿಯೇ ತಾಯಿ, ದೈವ. ಆದರೆ ಇದನ್ನು ಉಳಿಸಬೇಕಾದದ್ದು ನಮ್ಮೆಲ್ಲರ ಕರ್ತವ್ಯವಾಗಿದೆ. ಇಂದು ಸಿಡಿಮದ್ದುಗಳನ್ನು ಸಿಡಿಸುವುದರ ಮೂಲಕ ಇಡೀ ಭೂಮಿಯನ್ನೇ ನಾಶಮಾಡಲಾಗುತ್ತಿದೆ. ಹೀಗೆ ಸಿಪಿಕೆಯವರು ಪರಿಸರ ಸಂರಕ್ಷಣೆ, ಆತ್ಮರಕ್ಷಣೆ, ಪರಿಸರ ನಾಶ ಆತ್ಮಹತ್ಯೆ ಎಂಬುದಾಗಿ ಅವರು ಹೇಳಿದ್ದಾರೆ. ಹೀಗೆ ಪರಿಸರದ ಬಗ್ಗೆ ತಮ್ಮ ಕಾಳಜಿಯನ್ನು ಚುಟುಕುವಿನ ಮೂಲಕ ತಿಳಿಸಿದ್ದಾರೆ.

**ಹೆಣ್ಣನ್ನು ಕುರಿತು ಸಿಪಿಕೆ ಅವರ ಚಿಂತನೆ**

ಹೆಣ್ಣೊಂದು ಕಲಿತರೆ, ಮನೆಯೊಂದು ತೆರದಂತೆ, ಹೆಣ್ಣಿದ್ದ ಮನೆಯ ಸೌಭಾಗ್ಯವೇ ಬೇರೆ. ಹೆಣ್ಣೇ ಜಗತ್ತಿನ ಜನನಿ, ಜಗತ್ತಿನ ಕಣ್ಣು ಇವೇ ಮುಂತಾದಂತಹ ಮಾತುಗಳನ್ನು ಸರ್ವಗುಣ ಸಂಪನ್ನಳಾದ ಹೆಣ್ಣಿನ ಬಗ್ಗೆ ಹೇಳಿರುವುದು ಸೂಕ್ತವಾದುದಾಗಿದೆ.

**ದೇವರು**

**ಹೆಣ್ಣು ಸೌಂದರ್ಯ**
**ಎಂಬುದಂತಿರಲಿ**
**(ಅದನ್ನು ದೈವ ಕೊಡಬೇಕು)**
**ಅವಳು ಮಾಧುರ್ಯ, ಮಾರ್ದವ**
**ನೈರ್ಮಲ್ಯ, ನಯ, ನವುರು**
**ಇಷ್ಟಾದರೆ ಸಾಕು**
**ಅವಳೆ ದೇವರು!** (ಆಲಿಕಲ್ಲು ಹನಿಗವನಗಳು, ಪು. ೧೭೫)

ಹೆಣ್ಣಿನ ಸೌಂದರ್ಯ ದೇವರು ಕೊಟ್ಟಂತಹ ಸೌಂದರ್ಯ. ಆದರೆ ಆಂತರೀಕ ಸೌಂದರ್ಯ ಅತ್ಯಂತ ಅವಶ್ಯಕವಾಗಿದೆ. ಬಾಹ್ಯ ಸೌಂದರ್ಯ ಶಾಶ್ವತವಲ್ಲ. ಅಶಾಶ್ವತವಾದುದಾಗಿದೆ. ಆದ್ದರಿಂದಾಗಿ ಸಿಪಿಕೆ ಯವರು ಆವರಣದಲ್ಲಿ ಅದನ್ನು ದೈವ ಕೊಡಬೇಕು ಎಂದು ಹೇಳಿದ್ದಾರೆ. ಹೆಣ್ಣು ಎಂದರೆ ಹಣ್ಣು ಎಂದು ಭಾವಿಸುತ್ತಾರೆ. ಅಲ್ಲದೆ ಹೆಣ್ಣನ್ನು ಹೊಗಳುವುದರ ಜೊತೆಗೆ ಅವಳಲ್ಲಿರುವ ಗುಣಾವಗುಣಗಳನ್ನುಎತ್ತಿಹಿಡಿದಿದ್ದಾರೆ. ಆದ್ದರಿಂದ ಹೆಣ್ಣೆಂಬ ಜ್ಯೋತಿ ಉರಿದರೆ ಮನೆಗೆ ಬೆಳಕು ಇಲ್ಲದಿದ್ದರೆ ಮನೆ ಕತ್ತಲಾಗುತ್ತದೆ. ಆದ್ದರಿಂದ ಹೆಣ್ಣು ನಮ್ಮ ಮನೆಯ ಸೌಭಾಗ್ಯದೇವತೆಯಾಗಿದ್ದಾಳೆ. ಹೀಗೆ ಸಿ.ಪಿ.ಕೆ. ಯವರು ಹೆಣ್ಣನ್ನು ದೇವರ ರೂಪದಲ್ಲಿ ನೋಡಿ ಆರಾಧಿಸಿದ್ದಾರೆ.

**ಹಾಸ್ಯ**

ಹಾಸ್ಯವೇ ಮನುಷ್ಯನ ಸಂತೋಷದ ಪ್ರತೀಕವೆಂದು ಹೇಳಬಹುದಾಗಿದೆ. ಏಕೆಂದರೆ ಹಾಸ್ಯ ಮನುಷ್ಯನ ಮರ್ಕಟವೆಂಬ ಮನಸ್ಸನ್ನೇ ಸಂತೋಷದಲ್ಲಿ ಮುಳುಗಿಸಬಹುದಾಗಿದೆ. ಅಲ್ಲದೆ ಹಾಸ್ಯರಹಿತ ಜೀವನವನ್ನು ಕಲ್ಪಿಸಿಕೊಳ್ಳಲೂ ಕೂಡ ಸಾಧ್ಯವಿಲ್ಲ.

**ಊಟ**

**ಕೆಲವರ ಪಾಲಿಗೆ ಸಂಬಳ**
**ಕೇವಲ ಉಪ್ಪಿನಕಾಯಿ;**
**'ಗಿಂಬಳವೇ' ಅವರಿಗೆ**
**ಊಟ!**

(ಸಿಪಿಕೆ ಸಮಗ್ರ ಕವಿತೆ)

ಹೀಗೆ ಊಟವೆಂಬುದು ಹೀಗೆ ಇರುತ್ತದೆ ಎಂಬುದನ್ನು ಹಾಸ್ಯದ ಮೂಲಕ ಸಿ.ಪಿ.ಕೆ.ಯವರು ಎತ್ತಿಹಿಡಿದಿದ್ದಾರೆ. ಹೀಗೆ ಸಿ.ಪಿ.ಕೆ.ಯವರು ಹಾಸ್ಯದ ನೆಲೆಯಲ್ಲಿ ತಮ್ಮದೇ ಆದಂತಹ ಛಾಪನ್ನು ಮೂಡಿಸಿದ್ದಾರೆ. ಹೀಗೆ ಸಿ.ಪಿ.ಕೆ.ಯವರು ನಗುವಿನ ಮೂಲಕ ವಿವಿಧ ವಿಷಯಗಳನ್ನು ವಿಡಂಬಡಿಸಿದ್ದಾರೆ.

ಡಾ. ಸಿ.ಪಿ.ಕೆ.ಯವರು ತಮ್ಮ ಚುಟುಕುಗಳ ಮೂಲಕ ವೈಶಿಷ್ಟ್ಯತೆಯಿಂದ ಮೆರೆದರು ಟೀಕೆಗಳಿಂದ ಮುಕ್ತವಾಗಿಲ್ಲ.

ಚುಟುಕು, ಹನಿಗವನ, ಕಿರುಗವನ – ಹೆಸರು ಹಲವಾರು; ಅದರ ಲಕ್ಷಣ–ಅವಲಕ್ಷಣವನ್ನು ಜಯರಾಂ ರವರು ತಿಳಿಸಿದ್ದಾರೆ. ತಮ್ಮದೇ ಆದಂತಹ ಟೀಕೆಯನ್ನು ವ್ಯಕ್ತಪಡಿಸಿದ್ದಾರೆ.

**ತೊಟ್ಟು**

**ಚುಟುಕು, ಹನಿಗವನ ಎಂದರೆ**
**ಏನೆಂದು ತಿಳಿದಿದ್ದೀರಿ,**
**ವಾಚಕರೇ?**
**ಅಮೃತದ ತೊಟ್ಟು;**
**ಅಂತೆಯೇ ಕಾವ್ಯಕಾಮಿನಿಯ**
**ಎದೆ ತೊಟ್ಟು!** (ಸಿಪಿಕೆ ಸಮಗ್ರ ಕವಿತೆ, ಪು. ೩೪೯)

ಕವಿಯ ರಸಿಕತೆಯನ್ನು ಮೆಚ್ಚಬೇಕಾದದ್ದೆ. ಈ ಉಪಮೆಗಳು ಸಾಧ್ಯವಾದುದೇ. ಆದರೆ ಅನೇಕ ಚುಟುಕುಗಳು ಮುದಿ ಎದೆಯ ರಸಹೀನ ಚೂಚುಕವಾಗಿದೆಯಲ್ಲ ಎಂದು ಸಹ ಅನಿಸುತ್ತದೆಂದು ಹೇಳಿದ್ದಾರೆ. ಅಲ್ಲದೆ ಸಿ.ಪಿ.ಕೆ.ಯವರ ಸ್ತ್ರೀ ಪಕ್ಷಪಾತ ಇಲ್ಲಿದೆ.

**ಅನಿವಾರ್ಯ**

**ಹೆಣ್ಣನ್ನು ಬಿಟ್ಟರೆ**
**ಬಣ್ಣಿಸಲು**
**ಕವಿಗೆ ಮತ್ತೇನಿದೆ**
**ಮಣ್ಣು?** (ಚುಟುಕು ಪರಂಪರೆ : ಒಂದು ನೋಟ, ಪು. ೨೨)

ಹೀಗೆ ಇಂತಹ ಹೆಣ್ಣು ಮಕ್ಕಳ ನೂರಾರು ಚುಟುಕುಗಳ ರಚನೆಯ ಮೂಲಕ ಹೆಣ್ಣನ್ನು ಒಂದು ವಸ್ತುವಾಗಿ ನೋಡುತ್ತಿರುವುದು ಅಸಮಂಜಸವಾದುದಾಗಿದೆ. ಇಷ್ಟಲ್ಲದೇ ಸಿ.ಪಿ.ಕೆ.ಯವರು

**ಅನಿಷ್ಟ**

**ಸಮಾಜದಲ್ಲಿ**
**ಪುರುಷರಂತೆ ಅನಿಷ್ಟರು ಅನೇಕ**
**ಸ್ತ್ರೀಯರೂ ಅನಿಷ್ಟರು**
**(ಅನಿಷ್ಟರೂ ಕೂಡ)**

(ಚುಟುಕು ಪರಂಪರೆ : ಒಂದು ನೋಟ, ಪು. ೨೨)

ಹೆಣ್ಣನ್ನು ಹೊಗಳಿ, ಗೌರವಿಸಿದಂತಹ ಸಿ.ಪಿ.ಕೆ.ಯವರು ಹೆಣ್ಣನ್ನು ಅನಿಷ್ಟ ಎಂದಿದ್ದಾರೆ. ಆದರೆ ಅನಿಷ್ಟರ ಜೊತೆ ಏಕೆ ಬಾಳಬೇಕು. ಅವರ ಜೊತೆ ಬದುಕು ಸಾಗಿಸುವ ಇತರ ಪುರುಷರು ಸಹ 'ಅನಿಷ್ಟರೂ ಕೂಡ' ಆಗಿದ್ದಾರೆ.

**ಮೋಡಿ**

**ಹೆಣ್ಣಿನ ಮೊದಲಿನ**

**ದೈನ್ಯ, ಕೀಳರಿಮೆ, ಮುಗ್ಧತೆ**

**ಅಂತಿಮವಾಗಿ ಅಪ್ರತಿಹತ**

**ವಿಜೃಂಭಿಸುತ್ತದೆ**

**ಅವಳ ಅಧಿಕಾರ, ಮೋಡಿ!** (ಸಿಪಿಕೆಯವರ ಚುಟುಕುಗಳು)

ಹೆಣ್ಣು ಮೊದಲಿನಿಂದಲೇ ಎಲ್ಲರನ್ನು ಬೇಕು ಬೇಕೆಂದು ಮೋಡಿಯನ್ನು ಮಾಡುವುದಿಲ್ಲ. ದೈನ್ಯದಿಂದ, ನಯ, ವಿನಯತೆಯಿಂದ ತಮ್ಮ ಜೀವನವನ್ನು ನಡೆಸಿಕೊಂಡು ಹೋಗುತ್ತಿರುತ್ತಾಳೆ. ಆದರೆ ಅವಳ ಈ ತಾಳ್ಮೆ ಪರೀಕ್ಷೆಯೆ ಅಧಿಕಾರದಲ್ಲಿ ಮೋಡಿ ಮಾಡಲು ಸಾಧ್ಯವಾಗುತ್ತದೆ. ಇಲ್ಲಿನ ಪದಗಳ ಬಳಕೆ ಉತ್ತಮವಾಗಿದ್ದು, ಹೇಳುವ ಧಾಟಿಯಲ್ಲಿ ಇಂತಹ ವ್ಯತ್ಯಾಸ ಕಂಡುಬರುತ್ತದೆ.

ಜಯರಾಂ ರವರು ಮತ್ತೆ ಮಿಥ್ಯದ ಬಗ್ಗೆಯೂ ಟೀಕಿಸಿದ್ದಾರೆ.

**ಮಿಥ್ಯೆ**

**ಬಹುಶಃ ಹೆಣ್ಣು**

**ನಗುತ್ತಾಳೆ ಒಳಗೊಳಗೆ**

**ತನ್ನ ಬಗೆಗೆ**

**ಗಂಡುಲೋಕ ಬಡಬಡಿಸುವುದೆಲ್ಲ**

**ಎಂಥ ಮಧುರ ಮಿಥ್ಯೆಯೆಂದು** (ಚುಟುಕು ಸಾಹಿತ್ಯ ಪರಂಪರೆ
ಸಿಪಿಕೆ ಚುಟುಕುಗಳ ಸಮೀಕ್ಷೆ)

ಇಲ್ಲಿ ಆತ್ಮಾವಲೋಕನ ಇದೆ. ಹೆಣ್ಣಿನ ಅಂತರಂಗದ ಪರಕಾಯ ಪ್ರವೇಶವೂ ಸಾಧ್ಯವಾಗಿದೆ. ಹೀಗೆ ಇನ್ನೊಂದು ನೆಲೆಯಲ್ಲಿ, ಪಾತ್ರದಲ್ಲಿ ನಿಂತು ಅವಲೋಕಿಸಿದಾಗ ಸದ್ಯದ ಮತ್ತೊಂದು ಮಗ್ಗಲು ಕಂಡೀತು!

**ಎದೆ–ಹಾಲು**

**ದೊಡ್ಡವರಿಗಿರಲಿ**

**ಎದೆ**

**ಮಕ್ಕಳಿಗೆ**

**ಎದೆ ಹಾಲು!** (ಚುಟುಕು ಸಾಹಿತ್ಯ ಪರಂಪರೆ
ಸಿಪಿಕೆ ಚುಟುಕುಗಳ ಸಮೀಕ್ಷೆ)

ರೋಮ್ಯಾಂಟಿಕ್ ಕವಿಯ ಉದ್ಗಾರಗಳು ಸ್ವಲ್ಪ 'ಪೋಲಿ' ಎನಿಸಿದರು ಸಹಿಸಬಹುದೇನೋ! ಆದರೆ ಬೇಕು ಎಂಬಂತಹ ಅಂಶವನ್ನು ಜಯರಾಂರವರು ಹೇಳಿದ್ದಾರೆ.

**ಶತ್ರು**

**ಹೆಣ್ಣಿಗೆ ಹೆಣ್ಣೇ**
**ಶತ್ರು**
**ಹೌದು ಗಂಡಿಗೂ**
**ಹೆಣ್ಣೇ ಶತ್ರು** (ಚುಟುಕು ಸಾಹಿತ್ಯ ಪರಂಪರೆ
ಸಿಪಿಕೆ ಚುಟುಕುಗಳ ಸಮೀಕ್ಷೆ)

ಈ ಹೇಳಿಕೆಯ ಆಳದಲ್ಲಿ ಹೆಣ್ಣು 'ಸರ್ವನಾಶಕಾರಿಣಿ' ಎಂಬ ಸಾಂಪ್ರದಾಯಕ ರೂಢಮೂಲ ಜಾಡ್ಯವಿದೆ. (ಇದು ಕವಿಯ ವೈಚಾರಿಕತೆಯ ಮಿತಿಯೂ ಹೌದು!) ಹೀಗೆ ಎಲ್ಲದ್ದಕ್ಕೂ ಹೆಣ್ಣೇ ಶತ್ರುವಲ್ಲ.

ಹೀಗೆ ಹಲವಾರು ಚುಟುಕುಗಳನ್ನು ಜಯರಾಂ ರವರು ಟೀಕಿಸಿ, ಖಂಡಿಸಿದ್ದಾರೆ. ಅದರ ಮೌಲ್ಯ ಮತ್ತು ಮೌಲ್ಯಹೀನ ಅಂಶಗಳೆರಡನ್ನೂ ಸಹ ಇವರು ಟೀಕಿಸಿದ್ದಾರೆ.

**ಕರ್ಮ**

**ಅವರವರು ಮಾಡಿದ್ದನ್ನು**
**ಅವರವರೇ ಉಣ್ಣಬೇಕೆಂಬುದು**
**ನಿಯತಿ;**
**ಆದರೆ ಗೃಹಿಣಿ ಮಾಡಿದ್ದನ್ನು**
**ಗಂಡ, ಮಕ್ಕಳು ಉಣ್ಣಬೇಕಲ್ಲ,**
**ಎಂಥ ದುರ್ಗತಿ!** (ಸಿಪಿಕೆ ಸಮಗ್ರ ಕವಿತೆ, ಪು. ೩೮೦)

ಹೆಣ್ಣು ಮನೆಗೆ ಭೂಷಣ. ಹೌದು ಅವರವರು ಮಾಡಿದ ಕರ್ಮ ಎಂದರೆ ಪಾಪ-ಪುಣ್ಯಗಳನ್ನು ಅನುಭವಿಸುತ್ತಾರೆ. ಆದರೆ ಗೃಹಿಣಿ ತಮ್ಮ ಹೊಟ್ಟೆಗೆ ಮಾಡಿಕೊಡದೆ ಇದ್ದಾಗ ಅನುಭವಿಸುವ ಯಾತನೆ ಹೇಳತೀರದು. ಆದ್ದರಿಂದಲೇ ಹೆಣ್ಣು ಮನೆಯ ಕಣ್ಣು ಅವಳು ಇಲ್ಲದಿದ್ದರೆ ಇಡೀ ಮನೆಯೆ ಶೂನ್ಯವಾಗುವುದರಲ್ಲಿ ಸಂಶಯವಿಲ್ಲ. ಆದರೆ ಹೊರಗಿನ ಸೋಡಭರಿತವಾದಂತಹ ಆಹಾರಕ್ಕಿಂತ ನಾವು ಕಲಿತು ನಮ್ಮ ನಮ್ಮ ಊಟವನ್ನು ತಯಾರಿಸಿಕೊಳ್ಳುವುದು ಉತ್ತಮವಾದುದಾಗಿದೆ.

ಡಾ. ಸಿ.ಪಿ.ಕೆ. ಅವರ ಚುಟುಕುಗಳ ವೈಶಿಷ್ಟ್ಯತೆಯ ಪ್ರಮುಖ ಅಂಶವೆಂದರೆ ಆವರಣದಲ್ಲಿ ಬರೆಯುವುದಾಗಿದೆ. ಆವರಣದಲ್ಲಿ ಬರೆಯುವ ಅಂಶಗಳು ವಿಡಂಬನಾತ್ಮಕ-

ವಾಗಿಯೂ ಇರುತ್ತದೆ. ಇದು ಇವರ ವಿಶಿಷ್ಟ ಶೈಲಿಯೂ ಸಹ ಆಗಿದೆ. ಇದಕ್ಕೆ ಈ ಕೆಳಗಿನ ಚುಟುಕುಗಳನ್ನು ಉದಾಹರಿಸಬಹುದಾಗಿದೆ.

**ವಿಶ್ವಕಮಲ**

**ಸಹಸ್ರದಲ ಲಕ್ಷದಲ ಕೋಟಿದಲ**
**ದಲವಾಗಿ ಅರಳಿ**
**ಸುಗಂಧ ಸೂರೆ ಹೋಗಿರುವಾಗ**
**ಸಾಕೆ ಸುವಾ(ಹಾ)ಸಿನಿಯರ ಹೂ ಸುವಾಸನೆ?**

(ಚೋದ್ಯ-ಕುಚೋದ್ಯ ಚುಟುಕು)

ವಿಶ್ವವೇ ಒಂದು ಕಮಲವಾಗಿರುವ ಹೋಲಿಕೆ ಕವಿಯ ವಿಶಾಲ ಅನುಭವವನ್ನು ತೆರೆದಿಡುತ್ತದೆ. ಅಗೆದಷ್ಟು ಮೊಗೆದಷ್ಟು ರಸವು ದೊರೆತು ಸುವಾಸಿನಿಯರ ಸುಗಂಧದಲ್ಲಿ ಸುಖಿಸಲಾಗುತ್ತದೆ. ಆದ್ದರಿಂದ ಕೊನೆಯ ಸಾಲಿನಲ್ಲಿ ಸುವಾಸಿನಿ ಮತ್ತು ಸುಹಾಸಿನಿ ಎಂಬ ಎರಡು ಅರ್ಥಗಳು ಬಂದಿದೆ.

**ಅರ್ಥ**

**ಹೆಣ್ಣು ಗಂಡಿನ**
**ಅರ್ಧಾಂಗ(ಗಿ)**
**ಅವಳಿಲ್ಲದೆ**
**ಗಂಡಿಗೆ**
**ಪಾರ್ಶ್ವವಾಯು** (ಸಿಪಿಕೆ ಚುಟುಕುಗಳು)

ಈ ಮೇಲಿನ ಚುಟುಕು ಹೆಣ್ಣಿನ ಮೌಲ್ಯವನ್ನು ವ್ಯಕ್ತಪಡಿಸುತ್ತದೆ. ಹೆಣ್ಣು ಮತ್ತು ಗಂಡಿನ ಪ್ರೀತಿ, ಅನುಬಂಧವನ್ನು ವ್ಯಕ್ತಪಡಿಸುತ್ತದೆ. ಅಲ್ಲದೆ (ಗಿ) ಎಂಬುದು ಅರ್ಧಾಂಗಿ ಎಂಬುದನ್ನು ಸೂಚಿಸಿ ತನ್ನ ವಿಶಿಷ್ಟತೆಯನ್ನು ಮೆರೆದಿದೆ.

**ಯುಗ ಸಂದೇಶ**

**ಗಂಡು ಹೇಗೆ ಬೇಕಾದರೂ ಇರಬಹುದು**
**ಹೆಣ್ಣು ಶುದ್ಧಳಾಗಿರಬೇಕು**
**ಎನ್ನುವುದು ಹಿಂದಿನ ಯುಗ**
**ಇಟ್ಟರು ಶುದ್ಧವಾಗಿದ್ದರೆ ಮೇಲು**
**ಎನ್ನುವುದು ಇಂದಿನ ಯುಗ**

**'ಇಬ್ಬರೂ ಕಡೆಬಹುದು' ಎಂಬುದು**

**(ಈಗಾಗಲೇ ಹುಟ್ಟಿರುವ) ಮುಂದಿನ ಯುಗ**

(ಅಹನ್ಯ ಸಂಕಲನ, ಚುಟುಕು ಸಾಹಿತ್ಯದ ಪರಂಪರೆ ಹಾಗೂ ಸಿಪಿಕೆ ಚುಟುಕುಗಳ ಸಮೀಕ್ಷೆ)

ಈ ಮೇಲಿನ ಚುಟುಕು 'ಚಟುಕುವಾಗಿಲ್ಲ. ಏಕೆಂದರೆ ಇದು ಗದ್ಯದ ರೂಪದಲ್ಲಿ ಇದೆ. ಆದರೂ ಇಲ್ಲಿ ಆವರಣದಲ್ಲಿ (ಈಗಾಗಲೇ ಹುಟ್ಟಿರುವ) ಎಂಬುದು ಭವಿಷ್ಯತ್ತಿನ ಬಗ್ಗೆ ಹೇಳುವುದಾದರೂ ಪ್ರಸ್ತುತದಲ್ಲಿ ಹುಟ್ಟಿರುವವರ ಬಗ್ಗೆಯೂ ತಿಳಿಸುತ್ತಿದೆ. ಇದು ಇವರ ಕಲೆಯೂ ಸಹ ಆಗಿದೆ.

**ಸಾವು**

**ಸಾವಿನ ಬಗೆ**

**ಸಾವಿರ ಇಲ್ಲವೆ ನೂರು**

**ಸಾವಿರದವರು**

**ಯಾರು? (ಹುಟ್ಟಿದವರು)**

(ಕ್ಷಣಕ್ಷಣ)

ಇಲ್ಲಿ ಆವರಣದಲ್ಲಿ ಹುಟ್ಟಿದವರು ಎಂದು ಹೇಳಿರುವುದು ಔಚಿತ್ಯಪೂರ್ಣವಾಗಿದೆ. ಏಕೆಂದರೆ ಹುಟ್ಟಿದವರಿಗೆಲ್ಲ ಸಾವು ನಿಶ್ಚಿತವಾದಂತಹದ್ದು ಎಂಬ ವಿಡಂಬನೆ ಇಲ್ಲಿ ಕಂಡುಬರುತ್ತದೆ. ಅಲ್ಲದೆ ಸಾವಿನ ಸಾವಿರ, ನೂರು ಬಗೆಗಳನ್ನು ನಾವು ಕಣ್ಣಮುಂದೆ ಕಾಣಲು ಸಾಧ್ಯವಿಲ್ಲ. ಸಾವೆಂಬುದು ಕ್ಷಣಿಕವಾದುದಾಗಿದೆ. ಆದ್ದರಿಂದಾಗಿ ಆವರಣದಲ್ಲಿ ಬರೆಯುವುದು ಕೇವಲ ಅಂದಕ್ಕಾಗಿ ಅಲ್ಲ, ಅಲ್ಲಿ ಏನೋ ಒಂದು ಸಂದೇಶವಿದೆಂಬುದು ನಮಗೆ ತಿಳಿಯುತ್ತದೆ.

**ಭಗವತ್ ಕೃಪೆಯಿಂದ**

**ನೀರು ತೀರ್ಥವಾಗುತ್ತದೆ. ಸಾಮಾನ್ಯ ಮನುಷ್ಯ**

**ಪಾರ್ಥನಾಗುತ್ತಾನೆ (ಅಮೃತತ್ವಕ್ಕೆ ಪಾತ್ರ ಕೂಡ)**

(ಕ್ಷಣಕ್ಷಣ)

ಜಯರಾಂ ರವರು ಇದನ್ನು ಟೀಕಿಸಿದ್ದಾರೆ. ಇಲ್ಲಿ ವಿರೋಧಾಭಾಸವು ಸಹ ಅಡಗಿದೆ. ಅಭ್ಯಾಸ ಬಲದಿಂದ "ದೇವರು" "ಭಗವಂತ" ಎಂಬ ಶಬ್ಧಗಳು ಬಾಯಿಂದ ಹೊರಡುತ್ತದೆ ಎಂದು ಕಾಣುತ್ತದೆ. ಅಲ್ಲದೆ ಎಂಥ 'ಬದ್ಧ' ನಾಸ್ತಿಕರೂ, ವಿಚಾರವಾದಿಗಳೂ 'ಅಯ್ಯೋ ದೇವರೇ' ಎಂದುಉದ್ದೇಶವಿಲ್ಲದೆಯೆ ಮಾತಿನ ಆವೇಗದಲ್ಲಿ ಉದ್ಗಾರ ತೆಗೆಯುವಂತೆ ಎಂದು ಭಾವಿಸಬೇಕೆ? ಎಂದು ಟೀಕೆ ಮಾಡಿದ್ದಾರೆ.

**ಹೆಣ್ಣು ಎಂಬರ್ಥದ**
**ಶಬ್ದಗಳು ಹಲವು;**
**ಈಗಾದರೋ ಅತ್ಯುಚಿತ**
**'ಮಾನಿನಿ'**
**(ಹಿಂದವಳು ಕೇವಲ ಮೋಹಿನಿ)** (ಕ್ಷಣಕ್ಷಣ)

ಹೀಗೆ ಆವರಣದಲ್ಲಿ ಬರೆದಿರುವಂತಹ ಮೋಹಿನಿ ಎಂಬ ಪದದಲ್ಲಿ ಏನಿದೆಂಬುದನ್ನು ಹೀಗೆ ಹೇಳುತ್ತಾರೆ. ಜಯರಾಂ ರವರು ಮೋಹಿನಿ ಎಂಬ ಪದಕ್ಕೆ ಬದಲಾಗಿ 'ಭಗಿನಿ' ಎಂದು ಬಳಸಿದ್ದರೆ ಹೆಚ್ಚು ಧ್ವನಿಪೂರ್ಣವೂ, ಅರ್ಥಪೂರ್ಣವೂ ಆಗುತ್ತಿತ್ತು. ಅಷ್ಟೇ ಅಲ್ಲ. ಇತಿಹಾಸದ ವಾಸ್ತವ ಪ್ರಯೋಗ ಕೂಡ ಎಂದು ಹೇಳಿದ್ದಾರೆ.

ಹೀಗೆ ಸಿ.ಪಿ.ಕೆ.ಯವರ ಆವರಣದಲ್ಲಿ ಬರೆಯುವಂತಹ ಕಲೆ ಉತ್ತಮವಾಗಿದ್ದು, ವಿವಿಧ ರೀತಿಯಲ್ಲಿ ಅದನ್ನು ವಿಡಂಬಿಸಿದ್ದಾರೆ. ಹೀಗೆ ಸಿ.ಪಿ.ಕೆ.ಯವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆಯೂ ಕೂಡ ಆಗಿದೆ.

**ಸ್ವಾತಂತ್ರ್ಯ**

**ಸ್ತ್ರೀಯರು ಚಳವಳಿ ಮಾಡಿ**
**ಯಾವ ಸ್ವಾತಂತ್ರ್ಯವನ್ನು ಬೇಕಾದರೂ**
**ತೆಗೆದುಕೊಳ್ಳಲಿ**
**ಪುರುಷರೊಡನೆ ಮಲಗದಿರುವ**
**ಸ್ವಾತಂತ್ರ್ಯವೊಂದರ ವಿನಾ!** (ಸಿಪಿಕೆಯವರ ಚುಟುಕುಗಳು)

ಡಾ. ಸಿ.ಪಿ.ಕೆ.ಯವರು ಹೆಣ್ಣಿನ ಸ್ವಾತಂತ್ರ್ಯ ಅದರಲ್ಲೂ ಈ ಸ್ವಾತಂತ್ರ್ಯವೊಂದನ್ನು ಬಿಟ್ಟು ಎಂದು ಹೇಳಿರುವುದು ಅಸಮಂಜಸವಾದುದಾಗಿದೆ. ಹೆಣ್ಣು ಕೇವಲ ಭೋಗದ ವಸ್ತುಗಳಲ್ಲ. ಇಂದು ಇಂತಹ ಕಾಮ ಹೆಣ್ಣನ್ನು ಪರಿಪೂರ್ಣವಾಗಿಯೇ ಸುಟ್ಟು ಹಾಕುತ್ತಿದೆ. ಆದ್ದರಿಂದಲೇ ಹೆಣ್ಣು ಹುಟ್ಟಿನಿಂದ ಸಾಯುವತನಕ ಅವಳು ಅನುಭವಿಸುವ ಯಾತನೆಗೆ ಮಾನವೀಯತೆ ತೋರಬೇಕಾಗುತ್ತದೆ.

**ಸಮಾಧಾನ**

**ಹೆಣ್ಣು ಎಷ್ಟೇ ಬೆತ್ತಲಾದರೂ**
**ದೇವರು ಕೊಟ್ಟ ಚರ್ಮವನ್ನು ಕೂಡ**
**ಕಳಚುಸುವುದು ಸಾಧ್ಯವಿಲ್ಲ**
**ಎಂಬುದೇ ಸಮಾಧಾನದ ವಿಷಯ!**

(ಸಿಪಿಕೆಯವರ ಚುಟುಕುಗಳು)

ಈ ಬೆತ್ತಲೆಗೆ ಕಾರಣಕರ್ತರು ಯಾರು? ದೇವರು ಕೊಟ್ಟ ಚರ್ಮವನ್ನು ಕೂಡ ಕಳಚದಿದ್ದರೆ ಪುರುಷನ ಕಾಮಕ್ಕೆ ಸಾರ್ಥಕವಾಗುತ್ತಿತ್ತೊ? ಇಷ್ಟೊಂದು ಹೀನವಾಗಿ ಹೆಣ್ಣನ್ನು ಕುರಿತು ಹೇಳುವುದು ಅಸಮಂಜಸವಾದುದಾಗಿದೆ.

ಹೀಗೆ ಜಯರಾಂ ರವರು ಸಿಪಿಕೆಯವರ ಹನಿಗವನಗಳನ್ನು ಅದರ ವಸ್ತು ವೈವಿಧ್ಯಕ್ಕಾಗಿ ಮೊದಲು ಗೌರವಿಸಬೇಕು, ಪುರಸ್ಕರಿಸಬೇಕು. ಕಾಮ, ಸಾವು ಮೊದಲಾದ ಸಶಕ್ತ ಮೂಲಭೂತವಾದ ವಿಷಯಗಳು ಇವರ ನೂರಾರು ಹನಿಗವನಗಳಿಗೆ ಜನ್ಮ ಕೊಟ್ಟಿವೆ ಎಂದು ತಿಳಿಸಿದ್ದಾರೆ.

ಒಟ್ಟಾರೆಯಾಗಿ, ಡಾ. ಸಿ.ಪಿ.ಕೆ.ಯವರು ಹೀಗೆ ಉತ್ತಮವಾದಂತಹ ವಿವಿಧ ನೆಲೆಗಳಲ್ಲಿ, ಚಿಂತನೆಗಳಲ್ಲಿ, ಚುಟುಕುಗಳು ಕಂಡುಬಂದರೂ ಅಲ್ಲಲ್ಲಿ ದೋಷಗಳು ಇವೆ. ಜೊತೆಗೆ ಹೆಣ್ಣಿನ ಬಗ್ಗೆ ಹೆಚ್ಚು ಒಲವನ್ನು ಇಟ್ಟುಕೊಂಡಿರುವಂತಹ ಸಿ.ಪಿ.ಕೆ.ಯವರು ಒಂದು ಕಡೆ ವರ್ಣನೆ ಮತ್ತೊಂದು ಕಡೆ ಅವರ್ಣನೆ ತಳದಿರುವುದು ಸರಿಯಲ್ಲ. ಏಕೆಂದರೆ ಇಂದು ಹೆಣ್ಣಿಲ್ಲ ಎಂದರೆ ಗಂಡಿನ ಜೀವನ ಶೂನ್ಯ ಎಂಬುದು ಅವರಿಗೂ ಗೊತ್ತಿದೆ. ಹೀಗೆ ಚುಟುಕು ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದಂತಹ ಕೊಡುಗೆಯನ್ನು ನೀಡಿದ್ದಾರೆ.

*****

# ಅಧ್ಯಾಯ – ೬

# ಉಪಸಂಹಾರ

ಡಾ. ಸಿ.ಪಿ.ಕೃಷ್ಣಕುಮಾರ್ ರವರು ಅಗಾಧವಾದ ಸಾಹಿತ್ಯ ಸಾಧನೆಯ ಹಿನ್ನೆಲೆಯುಳ್ಳಂತಹ ಮಹಾನ್ ಕವಿ. ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಮಕುಟ ಮಣಿಗಳಲ್ಲಿ ಇವರು ಸಹ ಒಬ್ಬರಾಗಿದ್ದಾರೆ. ಇವರ ಸಾಹಿತ್ಯ ಸಾಧನೆಯೇ ಅಪಾರವಾದುದಾಗಿದ್ದು,ಚುಟುಕು ರಚನೆಯು ಅದ್ಭುತವಾದುದಾಗಿದೆ. ಚುಟುಕು ಎಂಬ ಮೂರಕ್ಷರಲ್ಲಿ ಇವರು ಹಿಡಿದಿಟ್ಟಿರುವ ಸಾರ ಅಗಾಧವಾದುದಾಗಿದೆ. ಹೀಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದಂತಹ ಛಾಪನ್ನು ಮೂಡಿಸಿದ್ದಾರೆ.

ಡಾ. ಸಿ.ಪಿ.ಕೆ. ಅವರಲ್ಲಿ ವ್ಯುತ್ಪತ್ತಿ, ಬಹುಶ್ರುತತ್ವ ಕಲ್ಪನಾ ಕೌಶಲ, ಪ್ರತಿಭೆ, ನಿಶಿತಮತಿ, ವಾಗ್ಮಿತೆ, ಅನುವಾದ ನೈಪುಣ್ಯ, ಸಂಶೋಧನ ಸಾಮರ್ಥ್ಯ ಮತ್ತು ವಿಮರ್ಶಾ ಪ್ರೌಢಿಮೆಯನ್ನು ಕಾಣಬಹುದಾಗಿದೆ. ಹೀಗೆ ಶ್ರೇಷ್ಠ ಅಧ್ಯಾಪಕರೆಂದು, ಉತ್ತಮವಾಗ್ಮಿಯೆಂದು ಈಗಾಗಲೇ ಕನ್ನಡನಾಡು ಅವರನ್ನು ಗುರುತಿಸಿದ್ದು, ಕವಿಯಾಗಿ ತಮ್ಮ ಬದುಕನ್ನು ಪ್ರಾರಂಭಿಸಿದ ಸಿ.ಪಿ.ಕೆ.ಯವರು ಸಾಹಿತ್ಯದ ಹಾಗೂ ವಿದ್ವತ್ತಿನ ಎಲ್ಲ ಪ್ರಕಾರಗಳಲ್ಲಿಯೂ ತಮ್ಮದೇ ಛಾಪನ್ನು ಮೂಡಿಸಿದ್ದಾರೆ.

'ಡಾ. ಸಿ.ಪಿ.ಕೆ. ಅವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆ' ಎಂಬ ಅಧ್ಯಯನದ ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ವಿವರಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಚುಟುಕ ಸಾಹಿತ್ಯ ನಡೆದುಬಂದಂತಹ ದಾರಿಯನ್ನು ಸೋದಾಹರಣವಾಗಿ ವಿವರಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಡಾ. ಸಿ.ಪಿ.ಕೆ.ಯವರ ಬದುಕು ಬರೆಹವನ್ನು ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಚುಟುಕು ಸಾಹಿತ್ಯವನ್ನು ರೂಢಿಸಿದ ಕವಿಗಳ ಕಿರುಪರಿಚಯ ಮತ್ತು ಅವರ ಚುಟುಕುಗಳನ್ನು ತಿಳಿಸಿ, ತದನಂತರದಲ್ಲಿ ಡಾ. ಸಿ.ಪಿ.ಕೆ.ಯವರ ಚುಟುಕುಗಳನ್ನು ಸಾಮಾಜಿಕ, ಧಾರ್ಮಿಕ, ರಾಜಕೀಯ, ಹಾಸ್ಯ, ಸಾವು, ಹೆಣ್ಣಿನ ನೆಲೆಗಳ ಮೂಲಕ ವಿಶ್ಲೇಷಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಡಾ. ಸಿ.ಪಿ.ಕೆ. ಯವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆಯನ್ನು ಸಿಪಿಕೆಯವರ ಚಿಂತನೆಯ ವಿವಿಧ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಅಧ್ಯಯನದ ವಿಷಯವಾದ **'ಡಾ. ಸಿ.ಪಿ.ಕೆ. ಅವರ ಚುಟುಕು ಸಾಹಿತ್ಯದ ವೈಶಿಷ್ಟ್ಯತೆ'**ಗೆ ಸಂಬಂಧಪಟ್ಟಂತಗೆ ಉಪಸಂಹಾರದಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಎಲ್ಲಾ ಸಂಶೋಧನಾ ವಿಷಯಗಳನ್ನು ವಿಶ್ಲೇಷಿಸಲಾಗಿದೆ.

ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಚುಟುಕು ಸಾಹಿತ್ಯವು ತನ್ನದೇ ಆದಂತಹ ಕೊಡುಗೆಯನ್ನು ನೀಡಿದೆ. ಏಕೆಂದರೆ ಚುಟುಕನ್ನು ಮನುಕುಲದ ಆದಿಕಾವ್ಯವೆಂದು ಕರೆಯಬಹುದಾಗಿದೆ. ಏಕೆಂದರೆ ಇದು ಈವಾಗ ಪ್ರಾರಂಭವಾದಂತಹ ಸಾಹಿತ್ಯ ಪ್ರಕಾರವಲ್ಲ. ಕಪ್ಪೆಹರಭಟ್ಟನ ಶಾಸನದಿಂದ ಹಿಡಿದು ಇಂದಿನವರೆಗೂ ಚುಟುಕು ತನ್ನದೇ ಆದಂತಹ ವಿಸ್ತಾರವನ್ನು ಪಡೆದುಕೊಂಡಿದೆ. ಚುಟುಕು ಕಾಲಕ್ರಮೇಣ ವಿಕಾಸಗೊಂಡು ಭಾವಗೀತೆ ಖಂಡಕಾವ್ಯ, ಮಹಾಕಾವ್ಯಗಳ ಮಜಲಿನವರೆಗೆ ಬೆಳೆದು ತನ್ನದೇ ಆದಂತಹ ಇತಿಹಾಸವನ್ನು ಹೊಂದಿರುವ ಚುಟುಕು ಸಾಹಿತ್ಯ ಕ್ಷೇತ್ರಕ್ಕೆ ಒಂದು ದೀವಿಗೆಯ ಸ್ಥಾನವನ್ನು ತುಂಬುವುದರ ಜೊತೆಗೆ ತನ್ನದೇ ಆದ ನೆಲೆಯನ್ನು ಕಂಡುಕೊಂಡಿದೆ.

ಮನುಷ್ಯನ ದೈಹಿಕ ಬೆಳವಣಿಗೆಗೆ ಸಂಬಂಧಪಟ್ಟಂತೆ ಒಂದು ಗಾದೆಯ ಮಾತಿದೆ. ಮೂರ್ತಿ ಚಿಕ್ಕದಾದರೂ, ಕೀರ್ತಿ ದೊಡ್ಡದು. ಹಾಗೆಯೇ ಚುಟುಕು ಚಿಕ್ಕದಾದರೂ ಅದು ತಿಳಿಸುವ ಸಾರ ಮಾತ್ರ ಅಗಾಧತೆಯನ್ನು ಹೊಂದಿದೆ. ಆದ್ದರಿಂದಲೇ ಚುಟುಕು ಎಂಬುದಕ್ಕೆ ವಿಶೇಷವಾದಂತಹ ಶಕ್ತಿ ಇದ್ದು ಎಂತಹವರನ್ನು ಆಕರ್ಷಿಸುವ ಕಲೆ ಚುಟುಕಿಗಿದೆ. ಚಿಕ್ಕದಾಗಿ, ಚೊಕ್ಕವಾಗಿ ಇದ್ದಾಗ ನೋಡಲು, ಓದಲು ಸುಂದರವಾಗಿರುತ್ತದೆ. ಹಾಗೆಯೇ ಚುಟುಕು ಸಹ ತನ್ನ ಓದುಗರನ್ನು ಆಕರ್ಷಿಸುವುದರ ಮೂಲಕ ಸಾಹಿತ್ಯಕ್ಷೇತ್ರವನ್ನು ಶ್ರೀಮಂತಗೊಳಿಸುತ್ತಿದೆ.

ಸಾಹಿತ್ಯ ಎಂದಾಕ್ಷಣ ನಮ್ಮ ಕಣ್ಣಿಗೆ ಬರುವಂತದ್ದು ಪುಟಗಟ್ಟಲೇ ಇರುವ ಪದಗಳ ಜೋಡಣೆ, ಅರ್ಥ, ಅರ್ಥ, ವಿಷಯ ಅದರ ವಿನ್ಯಾಸ, ಅದರ ಭಾವನೆಗಳು ಇವೇ ಮೊದಲಾದಂತಹ ಅಂಶಗಳು ಗದ್ಯದಲ್ಲಿ ಕಂಡುಬರುತ್ತದೆ. ಆದರೆ ಚುಟುಕು ಚಿನಕುರಳಿ ಪಟಾಕಿಯಂತಿದ್ದು ಯಾವಾಗ ಬೇಕಾದರೂ ತನ್ನ ಮದ್ದನ್ನು ಸಿಡಿಸಬಹುದು. ಎಂದರೆ ತನ್ನ ಚಾಕಚಕ್ಯತೆಯ ಪದಗಳ ಬಳಕೆಯಿಂದ ಮೌನವಾಗಿ ತನ್ನ ಕೆಲಸವನ್ನು ಮಾಡುತ್ತದೆ. ಆದ್ದರಿಂದಾಗಿ ಚುಟುಕುವಿನಲ್ಲಿ ಅಂತಹ ಅಂತಃಶಕ್ತಿ ಅಡಗಿದೆ.

ಸಾಹಿತ್ಯಕ್ಷೇತ್ರದಲ್ಲಿ ಯಾವುದೇ ಪ್ರಕಾರವನ್ನು ತೆಗೆದುಕೊಂಡರು ಅದು ತನ್ನದೇ ಆದಂತಹ ಸ್ಥಾನಮಾನವನ್ನು ಹೊಂದಿರುತ್ತದೆ. ಹಾಗೆಯೇ ಚುಟುಕು ಸಾಹಿತ್ಯ ಪ್ರಕಾರದಲ್ಲಿ ಹೇಳುವುದನ್ನು ದೀರ್ಘವಾಗಿ ಎಂಬುದಕ್ಕಿಂತ ಚಿಕ್ಕದರಲ್ಲಿ ದೀರ್ಘತನವನ್ನು ಹುದುಗಿಸಿಟ್ಟುಕೊಂಡಿದೆ. ಆದ್ದರಿಂದಾಗಿ ಇಂತಹ ಕಲೆ ಬೇರೆ ಯಾವುದೇ ಸಾಹಿತ್ಯ ಪ್ರಕಾರಕ್ಕೂ ಇಲ್ಲವೆಂದು ಹೇಳಬಹುದಾಗಿದೆ. ಈ ಜೀವಸಂಕುಲಗಳಲ್ಲಿ ಅತ್ಯಂತ

ಚಿಕ್ಕದಾಗಿರುವ ಇರುವೆ ಎಂತಹ ದೊಡ್ಡಪ್ರಾಣಿಯನ್ನಾದರೂ ಅಲುಗಾಡಿಸುವಂತಹ ಶಕ್ತಿ ಅದಕ್ಕೆ ಹೇಗಿದೆಯೋ ಹಾಗೆಯೇ ಚುಟುಕು ತನ್ನ ಚಾಣಾಕ್ಷತನದಿಂದ ಎಂತಹದ್ದಾದರನ್ನು ಅಲುಗಾಡಿಸುವ ಶಕ್ತಿ ಇದಕ್ಕಿದೆ.

ಡಾ. ಸಿ.ಪಿ.ಕೆ. ಅವರ ಚುಟುಕು ಸಾಹಿತ್ಯವು ನಮ್ಮ ಸಾಹಿತ್ಯ ಮತ್ತು ಸಮಾಜಕ್ಕೆ ಪೂರಕವಾಗಿದ್ದು, ತನ್ನದೇ ಆದಂತಹ ವಿಶೇಷ ಕೊಡುಗೆಯನ್ನು ನೀಡಿದೆ. ೨೧ನೇ ಶತಮಾನದಲ್ಲಿ ಜನರು ಸ್ಪರ್ಧಾತ್ಮಕ ಮತ್ತು ಅವಸರದ ಜೀವನವನ್ನು ನಡೆಸುತ್ತಿದ್ದಾರೆ. ಇಂತಹ ಈ ಯುಗದಲ್ಲಿ ತಾಳ್ಮೆಯಿಂದ ಓದುವಿಕೆಯು ಎಷ್ಟೋ ಮಾರುಗಟ್ಟಲೆ ದೂರದಲ್ಲಿ ಹೋಗಿ ಕುಳಿತಿದೆ. ಇಂತಹ ಸಂದರ್ಭದಲ್ಲಿ ಓದುಗಾರರು ಈ ಪುಟ್ಟ ಪದಗಳನ್ನು ನೋಡಿ ಹೊರ ಅರ್ಥ ತಿಳಿದುಕೊಂಡರು. ಇವರ ಒಳ ಅರ್ಥವೇನೆಂಬುದನ್ನು ಮೆಲುಕು ಹಾಕುತ್ತಾರೆ. ಹಾಗೆಯೇ ಈ ಲೇಖಕರ ಚುಟುಕು ಸಾಹಿತ್ಯ ಇಂತಹ ಯುಗದ ಜನರಿಗೆ ಅತ್ಯಂತ ಅವಶ್ಯಕವಾಗಿ ಬೇಕಾಗಿದೆ. ಆ ಅವಶ್ಯಕತೆಯನ್ನು ಚುಟುಕು ಸಾಹಿತ್ಯ ಪೂರೈಸುತ್ತಿದೆ.

ಸಾಹಿತ್ಯವೆಂಬುದು ಜಡವಾದುದಲ್ಲ. ಅದು ನಿರಂತರವಾಗಿ ನದಿಯ ನೀರು ಹರಿಯುವ ಹಾಗೆ ಹರಿಯಬೇಕು. ಹಾಗೆಯೇ ನಿರೂಪಕರು ಸಹ ಚುಟುಕುವಿನ ಮೂಲಕ ಹೊಸ ಆಯಾಮವನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿದರು. ಆದ್ದರಿಂದಾಗಿ ಚುಟುಕು ಸಾಹಿತ್ಯ ಅದರಲ್ಲೂ ಇತರ ಕವಿಗಳ ಚುಟುಕುಗಳ ಹಾಗೆಯೇ ಸಿ.ಪಿ.ಕೆ. ಅವರ ಚುಟುಕುಗಳು ಸಾಹಿತ್ಯಕ್ಕೆ ಪೂರಕವಾದುದಾಗಿದೆ.

ಸಿ.ಪಿ.ಕೆ.ಯವರು ಚುಟುಕು ಕೇವಲ ಸಾಹಿತ್ಯಕ್ಷೇತ್ರಕ್ಕೆ ಮಾತ್ರ ಸೀಮಿತವೇ? ಇಲ್ಲ. ಇದು ಸಮಾಜಕ್ಕೂ ಸಹ ಪೂರಕವಾದುದಾಗಿದೆ. ಏಕೆಂದರೆ ಚುಟುಕುವಿನಲ್ಲಿ ಹೇಳಿರುವ ಒಂದೊಂದು ಅಂಶವು ಸಮಾಜದ ಏಳಿಗೆಗೆ ಕಾರಣವಾಗುವುದಲ್ಲದೆ, ವಿವಿಧ ಕ್ಷೇತ್ರಗಳ ಆಗು-ಹೋಗುಗಳನ್ನು ವಿಡಂಬಿಸುವುದರ ಮೂಲಕ ಎಚ್ಚರಿಕೆಯನ್ನು ಸಹ ನೀಡಿದ್ದಾರೆ. ಇವರು ಸಮಾಜದಲ್ಲಿನ ಸಾವು-ನೋವು, ಹೆಣ್ಣು, ಸುಖ-ದುಃಖ, ವಿಪರ್ಯಾಸಗಳು ಬೆಳವಣಿಗೆ, ಹಬ್ಬ-ಹುಣ್ಣಿಮೆ, ತಾಳ್ಮೆ, ಪ್ರೀತಿ, ಧರ್ಮ, ಜಾತಿ, ರಾಜಕೀಯ ಹಾಸ್ಯ ಇವೇ ಮೊದಲಾದಂತಹ ಸಮಾಜದ ವಿವಿಧ ಮಜಲುಗಳ ಬಗ್ಗೆ ತಮ್ಮದೇ ನಿಲುವಿನ ಮೂಲಕ ನ್ಯೂನತೆಯನ್ನು ಎತ್ತಿಹಿಡಿದಿದ್ದಾರೆ.

ಚುಟುಕು ಸಾಹಿತ್ಯವು ತನ್ನ ಕಿರುನಡಿಗೆಯ ಮೂಲಕ ಚುರುಕನ್ನು ಜಗತ್ತಿಗೆ ಮುಟ್ಟಿಸುತ್ತಿದೆ. ಎಲ್ಲರೂ ದೀರ್ಘಗದ್ಯವನ್ನು ತಿರಸ್ಕರಿಸುತ್ತಾರೆ. ಆದರೆ ಚುಟುಕುಗಳು ತಮ್ಮ ಬೆಲೆ ಏನು, ಸ್ಥಾನಮಾನವೇನೆಂಬುದನ್ನು ಕ್ಷಣಿಕದಲ್ಲೇ ತಿಳಿಸಿ, ವಿವೇಚನೆಗೆ ಅವಕಾಶವನ್ನು ನೀಡುತ್ತಾ ಬಂದಿದೆ. ಲೇಖಕರು ಸಹ ಇಂತಹ ವಿವೇಚನೆಗೆ ಹೆಚ್ಚಿನ ಅವಕಾಶವನ್ನು

ನೀಡುತ್ತಿದ್ದಾರೆ. ವಿವಿಧ ನೆಲೆಗಳಲ್ಲಿ ಇವರು ಹೇಳಿರುವ ಪದಗಳೆಂಬ ಬಣ್ಣದ ಚಮತ್ಕಾರದಿಂದ ಜನರಿಗೆ ವಿವಿಧ ಕ್ಷೇತ್ರಗಳ ಆಗುಹೋಗುಗಳ ಬಗ್ಗೆ ತಿಳಿಸಿ, ಮೌಢ್ಯತೆಯಿಂದ ಹೊರಬಂದು ವೈಚಾರಿಕತೆ ಮತ್ತು ವೈಜ್ಞಾನಿಕತೆ ಎರಡಕ್ಕೂ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಆದ್ದರಿಂದಾಗಿ ಈ ದಿನ ಸಮಾಜಕ್ಕೆ ಇಂತಹ ಚುಟುಕುಗಳ ಅತ್ಯಾವಶ್ಯಕವಾಗಿ ಬೇಕಾಗಿದೆ.

ಸಿ.ಪಿ.ಕೆ.ಯವರ ಚುಟುಕುಗಳಿಂದ ಮಾನವೀಯತೆಯ ಬೆಲೆ, ಹಾಸ್ಯವು ನಮ್ಮ ಜೀವನಕ್ಕೆ ಅತ್ಯಾವಶ್ಯಕವಾಗಿದೆಂಬುದನ್ನು ತಿಳಿಸಿದ್ದಾರೆ. ಇದಷ್ಟೇ ಅಲ್ಲ ಸಂಸಾರವೆಂಬ ದೋಣಿಯನ್ನು ನಡೆಸಲು ಗಂಡ–ಹೆಂಡತಿ ಎಂಬ ಇಬ್ಬರು ನಾವಿಕರು ಅತ್ಯಾವಶ್ಯಕವಾಗಿ ಬೇಕು. ಇವರಿಬ್ಬರ ಸಮತೋಲನದ ಜೀವನದಿಂದ ಸಂಸಾರವು ಉತ್ತಮವಾಗಿ ನಡೆಯುತ್ತದೆ. ಅಲ್ಲದೆ ಹೆಣ್ಣು ಅದರಲ್ಲೂ ಹೆಣ್ಣಿನ ಪ್ರೀತಿಯ ಬಗ್ಗೆ, ಆಕೆಯ ಅಂಗಾಂಗಗಳ ವಿನ್ಯಾಸ ಇವೇ ಮೊದಲಾದ ಅಂಶಗಳನ್ನು ಸೋದಾಹರಣವಾಗಿ ಹೇಳಿ, ಟೀಕೆಗೆ ಒಳಗಾದರೂ ಇರುವಂತಹ ವಿಷಯವನ್ನು ನೇರವಾಗಿ ಹೇಳಿದ್ದಾರೆ. ಇದರಿಂದಾಗಿ ಚುಟುಕು ಎಂಬುದೇ ಒಂದು ರೀತಿ ಚಾಟಿ ಏಟಾಗಿದೆ. ಅಂತಹ ಏಟನ್ನೇ ಇವರು ಚುಟುಕುವಿನ ಮೂಲಕ ಹೇಳಿದ್ದಾರೆ.

ಒಟ್ಟಾರೆಯಾಗಿ ಸಿ.ಪಿ.ಕೆ.ಯವರ ಒಂದೊಂದುಚುಟುಕು ರತ್ನ ಅತ್ಯಮೂಲ್ಯವಾದಂತಹ ಸಾರವನ್ನು ಹೊಂದಿದ್ದು, ಮನುಷ್ಯ ತನ್ನ ಪರಿಪೂರ್ಣತೆಯನ್ನು ಸಾಧಿಸುವುದರ ದಿಕ್ಕಿನಲ್ಲಿ ಈ ಚುಟುಕುಗಳು ರಚನೆಗೊಂಡಿದ್ದು ಸಮಾಜ್ಕಕೆ ಪೂರಕವಾಗಿದೆ. ಇಂತಹ ಮಹಾನ್ ಕೊಡುಗೆಯನ್ನು ಸಮಾಜಕ್ಕೆ ಸಿ.ಪಿ.ಕೆ.ಯವರು ನೀಡಿರುವುದು ಅದ್ವಿತೀಯವಾದಂತಹ ಕೊಡುಗೆಯೂ ಆಗಿದೆ. ಆದ್ದರಿಂದಾಗಿ ಸಿ.ಪಿ.ಕೆ. ಯವರು ಚುಟುಕು ಕ್ಷೇತ್ರದಲ್ಲಿ ಮಾಡಿದಂತಹ ಸಾಧನೆ ಉತ್ತಮವಾಗಿದ್ದು ಇಂದಿಗೂ, ಮುಂದೆಯೂ ಚಿರಾಯುವಾಗಿ ನಮ್ಮ ಜನರ ಜೀವನಮಾರ್ಗದಲ್ಲಿ ಒಳ್ಳೆಯ ಮಾರ್ಗದರ್ಶನವನ್ನು ಇದು ನೀಡುತ್ತದೆ. ಹೀಗೆ ಸಿ.ಪಿ.ಕೆ.ಯವರ ಚುಟುಕು ಸಾಹಿತ್ಯದ ಕೊಡುಗೆ ಅದ್ವಿತೀಯವಾದುದಾಗಿದೆ.

ಚುಟುಕು ಸಾಹಿತ್ಯವು ಆಧುನಿಕ ಪ್ರಪಂಚಕ್ಕೆ ಅತ್ಯಂತ ಅವಶ್ಯಕವಾಗಿದೆ. ಜಂಜಾಟದಲ್ಲಿ ಈ ದಿನ ಜೀವನವನ್ನು ನಡೆಸುತ್ತಿರುವ ಮನುಷ್ಯರಿಗೆ ದೊರೆತಂತಹ ಕ್ಷಣಿಕ ಕಾಲಾವಕಾಶದಲ್ಲಿ ಚುಟುಕು ಸಾಹಿತ್ಯವು ವಿವೇಚನೆಗೆ ಒಳಪಡಿಸುತ್ತದೆ. ಇಂತಹ ವಿವೇಚನೆಯಿಂದಲೇ ಆತನ ಜ್ಞಾನಾರ್ಜನೆಯು ಬೆಳೆಯುತ್ತಾ ಹೋಗುತ್ತದೆ. ಈ ಮಾತಲ್ಲಿ ಯಾವುದೇ ರೀತಿಯಾದಂತಹ ಸಂಶಯವೇ ಇಲ್ಲ. ಮನುಷ್ಯನಿಗೆ ವಿವೇಚನೆ ಎಂದರೆ ವೈಚಾರಿಕತೆ ಮತ್ತು ವೈಜ್ಞಾನಿಕ ಮನೋಭಾವನೆ ಅತ್ಯಂತ ಅವಶ್ಯಕವಾಗಿದೆ. ಇಂತಹ ಮಿಂಚಿನ ವೇಗದಲ್ಲಿ ಮನುಷ್ಯನ ಮನಸ್ಸೆಂಬ ದೇಗುಲವನ್ನು ಪ್ರವೇಶಿಸಿ, ದೇವತೆಯ ಸ್ಥಾನವನ್ನು ಚುಟುಕು ಪಡೆದುಕೊಂಡಿದೆ.

ಮನುಷ್ಯನ ಸಹಜ ಗುಣವೇ ಬಿಡಿಬಿಡಿಯಾಗಿ ಕಲಿಯುವುದರ ಮೂಲಕ ಹಿಡಿಯನ್ನು ಅರ್ಥಮಾಡಿಕೊಳ್ಳುವುದಾಗಿದೆ. ಹಾಗೆಯೇ ಚುಟುಕು ಸಹ ಮನುಷ್ಯನ ಬುದ್ಧಿಯನ್ನು ವಿವೇಚನೆಗೆ ಒಳಪಡಿಸಿ, ಜೀವನೆಂಬ ಹಡುಗನ್ನು ಹೇಗೆ ನಡೆಸಿಕೊಂಡು ಹೋಗಬೇಕು, ಅಲ್ಲದೆ ತನ್ನ ಜೀವನ ಮಾತ್ರವಲ್ಲದೆ ತನ್ನ ಸುತ್ತಮುತ್ತಲಿನ ಪ್ರಪಂಚದ ಅರಿವು ಮನದಟ್ಟಾಗಿ ಆಗುಹೋಗುಗಳನ್ನು ತಿಳಿದುಕೊಂಡು ತನ್ನ ಜೀವನವನ್ನು ಉತ್ತಮವಾಗಿ ರೂಪಿಸಿಕೊಳ್ಳುವುದರಲ್ಲಿ ಸಂಶಯವೇ ಇಲ್ಲ. ಆದ್ದರಿಂದಾಗಿ ಚುಟುಕು ಮಹಾನ್ ಚೇತನ, ಮನುಷ್ಯನ ಮಾನಸಿಕ ತುಮುಲತೆಗೆ ಮದ್ದನ್ನು ನೀಡುವ ದಿವ್ಯವಾದ ಔಷಧವಾಗಿದೆ.

ಒಟ್ಟಾರೆಯಾಗಿ ಚುಟುಕು ಮನುಷ್ಯನ ಆಂತರ್ಯದಲ್ಲಿ ಹುದುಗಿರುವ ಮೌಢ್ಯತೆಯನ್ನು ಹೋಗಲಾಡಿಸಿ ವಿವೇಚನೆಗೆ ದಾರಿಮಾಡಿಕೊಡುವುದಲ್ಲದೆ ಪ್ರಾಪಂಚಿಕ ಜ್ಞಾನವನ್ನು ಬೆಳೆಸುತ್ತದೆ. ಆದ್ದರಿಂದಾಗಿ ಚುಟುಕು ಅಲ್ಲಲ್ಲೇ ಸತ್ತುಹೋಗುವುದಿಲ್ಲ. ಇದು ಸರ್ವಕಾಲಿಕವಾದ ಗುಣವನ್ನು ಹೊಂದಿದ್ದು, ಇಂದಿಗೆ ಮತ್ತು ಮುಂದಿನ ಪೀಳಿಗೆಗೆ ಅಷ್ಟೇ ಮಾತ್ರವಲ್ಲದೇ ಪ್ರಪಂಚ ಅಳಿಯುವವರೆಗೂ ತನ್ನ ಮೌಲ್ಯವನ್ನು ಎತ್ತಿಹಿಡಿಯುತ್ತದೆ. ಆದ್ದರಿಂದಾಗಿ ಚುಟುಕು ದಣಿದು, ಬಾಯಾರಿಕೆಯಾದಾಗ ಒಂದು ಗುಟುಕು ನೀರು ನಮಗೆ ಹೇಗೆ ತೃಪ್ತಿಯನ್ನು ನೀಡುತ್ತದೆಯೋ ಹಾಗೆಯೇ ಆಹ್ಲಾದವನ್ನು, ಮನಸ್ಸನ್ನು ಪ್ರಫುಲ್ಲಗೊಳಿಸುತ್ತದೆ. ಇಂತಹ ಚುಟುಕುಗಳು ಎಂದೆಂದಿಗೂ ಬೇಕಾಗಿದೆ. ಹೀಗೆ ಚುಟುಕುಗಳು ಅಗಾಧವಾಗಿ ಮೂಡಿ, ನಮ್ಮ ಸಾಹಿತ್ಯಕ್ಷೇತ್ರಕ್ಕೆ ಮತ್ತಷ್ಟು ಮೆರುಗನ್ನು ನೀಡಲಿ.

ಹೀಗೆ ಚುಟುಕು ಸಾಹಿತ್ಯ ತನ್ನ ವಿಶಿಷ್ಟತೆಯ ಮೂಲಕ ತನ್ನ ನಿಲುವಿನೊಂದಿಗೆ ತನ್ನ ಘನತೆಯ ಮೇರು ಕಿರೀಟವನ್ನು ಹೊಂದಿ, ರಾರಾಜಿಸುತ್ತಿದೆ.

*****

# ಪರಾಮರ್ಶನ ಗ್ರಂಥಗಳು


೧. ಸಿಪಿಕೆ ಸಮಗ್ರ ಕವಿತೆ : ಸಂವಹನ ಪ್ರಕಾಶನ, ಮೈಸೂರು
೧೨/೧, ಈವನಿಂಗ್ ಬಜಾರ್ ಹಿಂಭಾಗ,
ಶಿವರಾಂಪೇಟೆ, ಮೈಸೂರು – ೫೭೦ ೦೦೧
ಮೊದಲ ಮುದ್ರಣ : ೨೦೦೦

೧.೧. ಚೋದ್ಯ–ಕುಚೋದ್ಯ ಹನಿಗವನಗಳು ೧೯೯೮
೧.೨. ಸಿಪಿಕೆ ಚುಟುಕುಗಳು, ಹನಿಗವನಗಳು ೧೯೯೭
೧.೩. ಹನಿಮಿನಿ ಹನಿಗವನಗಳು ೧೯೮೯

೨. ಸರಸತಿಯ ವರಪುತ್ರ (ಕವಿಗಳ ಕಣ್ಣಲ್ಲಿ ಸಿಪಿಕೆ) : ಸಂಪಾದಕರು
ಡಾ. ಮಳಲಿ ವಸಂತಕುಮಾರ್
ಮೊದಲ ಮುದ್ರಣ : ೨೦೦೯

ಮುದ್ರಕರು

ಶ್ರೀ ರಾಜೇಂದ್ರ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್
೧೨/೧, ಈವನಿಂಗ್ ಬಜಾರ್ ಹಿಂಭಾಗ,
ಶಿವರಾಂಪೇಟೆ, ಮೈಸೂರು – ೫೭೦ ೦೦೧

೩. ಕುಡಿ–ಕಿಡಿ (ಹನಿಗವನಗಳು) : ಡಾ. ಸಿ.ಪಿ.ಕೆ
ಮೊದಲ ಮುದ್ರಣ – ೨೦೧೫
ವಾಚಸ್ಪತಿ ಪ್ರಕಾಶನ
# ೬೫೮, ೨ನೇ ಮಹಡಿ, ೪ನೇ ಮುಖ್ಯ ರಸ್ತೆ,
೪ನೇ ಕ್ರಾಸ್, ಎ ಮತ್ತು ಎಫ್ ಬ್ಲಾಕ್,
೨ನೇ ಹಂತ ರಾಮಕೃಷ್ಣನಗರ, ಮೈಸೂರು.

೪. ಸುರನದಿಯ ತೀರ್ಥ : ಸಂಪಾದಕರು
ಸಿ.ಪಿ.ಕೆ.
ಚಿತ್ರಬಾನು ಪ್ರಕಾಶನ, ಮೈಸೂರು
ಮೊದಲ ಮುದ್ರಣ : ೧೯೭೯

೫. ಚುಟುಕು ಸಾಹಿತ್ಯ ವಿಮರ್ಶೆ : ಪ್ರಧಾನ ಸಂಪಾದಕರು
ಎಚ್.ಎಚ್.ಶಂಕರಲಿಂಗೇಗೌಡ
ವಿಧಾನಸಭಾ ಸದಸ್ಯರು
ಸಂಪಾದಕ
ಡಾ. ಎಂ.ಜಿ.ಆರ್.ಅರಸ್
ಮೊದಲ ಮುದ್ರಣ : ೧೯೯೮
ಸುಧರ್ಮ ಆಫ್‌ಸೆಟ್ ಪ್ರಿಂಟರ್ಸ್, ಮೈಸೂರು

೭. ಸಾಹಿತ್ಯ ತತ್ತ್ವ : ಮೂಲ: ರೆನೆವೆಲಕ್ ಆಸ್ಟಿನ್ ವಾರೆನ್
ಭಾಷಾಂತರ : ಸಿಪಿಕೆ
ಮೊದಲ ಮುದ್ರಣ : ೧೯೯೪
ತನುಮನು ಪ್ರಕಾಶನ
ಹೆಚ್.ಐ.ಜಿ. ೧೨೬೭, 'ಕಾವ್ಯಲೋಕ', ೧ನೇ
ತಿರುಮ ೨ನೇ ಹಂತ, ಶ್ರೀರಾಂಪುರ
ಬಡಾವಣೆ, ಮೈಸೂರು.

೭. ಸಿಪಿಕೆ ಬದುಕು ಬರಹ ಸೂಚಿ

೮. ಚುಟುಕು ಚಿಂತನ (ಡಾ. ಸಿಪಿಕೆ ಅವರ ಆಯ್ದ ಚುಟುಕು ಲೇಖನಗಳು) : ಸಿ.ಪಿ.ಕೆ.
ಕೌಸ್ತುಭ ಪ್ರಕಾಶನ
ರಾಮಕೃಷ್ಣನಗರ
ಮೈಸೂರು – ೫೭೦ ೦೨೨
ಪ್ರಥಮ ಮುದ್ರಣ : ೨೦೧೪

೯. ಮುಕ್ತಕ ಮುಕುರ : ಸಿ.ಪಿ.ಕೆ
ಚಿತ್ರಭಾನು ಪ್ರಕಾಶನ
೨೨೬೫/೧೯, 'ಭಾರತಿ'
೬ನೆಯ ಕ್ರಾಸ್, ವಿನಾಯಕನಗರ
ಮೈಸೂರು – ೫೭೦೦೧೨
ಪ್ರಥಮ ಮುದ್ರಣ : ೨೦೦೦

೧೦. ಅಹನ್ಯ ಹನಿ : ಡಾ. ಸಿಪಿಕೆ
ನಾಗಾರ್ಜುನ ಎಂಟರ್‌ಪ್ರೈಸಸ್
ನಂ. ೫೮, ಅಕ್ಕಮಹಾದೇವಿ ರಸ್ತೆ
ದಾವಣಗೆರೆ
ಮುದ್ರಣ : ೨೦೧೦

೧೧. ಹನಿವಾಹಿನಿ (ಹನಿಗವನಗಳು) : ಎಚ್.ದುಂಡಿರಾಜ್
ಅಂಕಿತ ಪುಸ್ತಕ
ಪ್ರಕಾಶಕರು ಮತ್ತು ಪುಸ್ತಕ ಮಾರಾಟಗಾರರು
೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್
ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ
ಬೆಂಗಳೂರು – ೫೬೦ ೦೦೪
ಮುದ್ರಣ : ೨೦೧೪

೧೨. ದಿನಕರನ ಚೌಪದಿ : ದಿನಕರ ದೇಸಾಯಿ
ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು – ೫೬೦ ೦೧೮
ಮುದ್ರಣ – ೨೦೧೦

೧೩. ಬಿ.ಟಿ.ಲಲಿತಾನಾಯಕ್ ಚುಟುಕುಗಳು : ಸಂಪಾದಕ : ಡಾ. ಎಂ.ಜಿ.ಆರ್.ಅರಸ್
ವೈದ್ಯ ವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ
ಮೈಸೂರು ೫೭೦ ೦೦೮
ಮುದ್ರಣ : ೨೦೦೬

೧೪. ಡಾ. ಅರವಿಂದ ಮಾಲಗತ್ತಿ ಅವರ ಆಯ್ದ ಚುಟುಕುಗಳು : ಸಂಪಾದಕರು : ಡಾ. ಎಂ.ಜಿ.ಆರ್.ಅರಸ್
ವೈದ್ಯ ವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ
ಮೈಸೂರು – ೫೭೦ ೦೦೮
ಮುದ್ರಣ : ೨೦೧೦

೧೫. ಡಾ. ಪಂಚಾಕ್ಷರಿ ಹಿರೇಮಠರ ಆಯ್ದ ಚುಟುಕುಗಳು : ಸಂಪಾದಕರು : ಡಾ. ಎಂ.ಜಿ.ಆರ್. ಅರಸ್
ವೈದ್ಯ ವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ
ಮೈಸೂರು – ೫೭೦ ೦೦೮
ಮುದ್ರಣ : ೨೦೦೯

೧೬. ಚುಟುಕು ಮಂದಾರ : ಪ್ರಧಾನ ಸಂಪಾದಕರು : ಎ.ರಾಮದಾಸ್
ವಿಧಾನಸಭಾ ಸದಸ್ಯರು
ಸಂಪಾದಕ : ಡಾ. ಎಂ.ಜಿ.ಆರ್. ಅರಸ್
ವೈದ್ಯ ವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ
ಮೈಸೂರು – ೫೭೦ ೦೦೮
ಮುದ್ರಣ : ೨೦೧೦

೧೭. ಧ್ರುವರಾಜ ಜೋಶಿ ಅವರ ಆಯ್ದ ಚುಟುಕುಗಳು : ಸಂಪಾದಕರು : ಡಾ. ಎಂ.ಜಿ.ಆರ್. ಅರಸ್
ವೈದ್ಯ ವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ, ಮೈಸೂರು–೫೭೦ ೦೦೮
ಮುದ್ರಣ : ೨೦೧೦

೧೮. ಚಂಪಾ ಚುಟುಕುಗಳು : ಸಂಪಾದಕರು : ಡಾ. ಎಂ.ಜಿ.ಆರ್. ಅರಸ್
ವೈದ್ಯ ವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ, ಮೈಸೂರು–೫೭೦ ೦೦೮
ಮುದ್ರಣ : ೨೦೧೧

೧೯. ನಾಡೋಜ ಚೆನ್ನವೀರ ಕಣವಿಯವರ ಆಯ್ದ ಚುಟುಕುಗಳು : ಸಂಪಾದಕರು : ಡಾ. ಎಂ.ಜಿ.ಆರ್. ಅರಸ್
ವೈದ್ಯ ವಾರ್ತಾ ಪ್ರಕಾಶನ
ವಿದ್ಯಾರಣ್ಯಪುರಂ
ಮೈಸೂರು – ೫೭೦ ೦೦೮
ಮುದ್ರಣ : ೨೦೦೯

| | | | |
|---|---|---|---|
| ೨೦. | ಅಕಬರ ಅಲಿ ಚುಟುಕುಗಳು | : | ಸಂಪಾದಕರು : ಡಾ. ಎಂ.ಜಿ.ಆರ್. ಅರಸ್<br>ವೈದ್ಯ ವಾರ್ತಾ ಪ್ರಕಾಶನ, ೧೧೦೪<br>ವಿದ್ಯಾರಣ್ಯಪುರಂ<br>ಮೈಸೂರು – ೫೭೦ ೦೦೮<br>ಮುದ್ರಣ : ೧೯೮೯ |
| ೨೧. | ಚುಟುಕು ಚೇತನ<br>ರಾಜ್ಯಮಟ್ಟದ ೧೫ನೇ ಚುಟುಕು<br>ಸಾಹಿತ್ಯ ಸಮ್ಮೇಳನ<br>ಅವಧೂತ ದತ್ತಪೀಠ ಗಣಪತಿ<br>ಸಚ್ಚಿದಾನಂದ ಆಶ್ರಯ<br>ಊಟಿರಸ್ತೆ, ಮೈಸೂರು | : | ಗೌರವ ಸಂಪಾದಕರು<br>ಹೆಚ್.ಎನ್.ಶಂಕರಲಿಂಗೇಗೌಡ<br>ವಿಧಾನಸಭಾ ಸದಸ್ಯರು<br>ಎಚ್.ಆರ್.ನರಸಿಂಹಯ್ಯ<br>ಸಂಪಾದಕ<br>ಡಾ. ಎಂ.ಜಿ.ಆರ್. ಅರಸ್<br>ಮುದ್ರಣ : ೧೯೯೯ |
| ೨೨. | ಡಾ. ಸಿ.ಪಿ.ಕೆ. ಅವರ ವಿಮರ್ಶೆ<br>ಮತ್ತು ವಿಚಾರ : ಒಂದು<br>ಅಧ್ಯಯನ | : | ಡಾ. ಪರ್ವೀನ್ ಸಲೀಂ<br>ಕನ್ನಡ ಸಾಹಿತ್ಯ ಪರಿಷತ್ತು<br>ಪಂಪಮಹಾಕವಿ ರಸ್ತೆ<br>ಚಾಮರಾಜಪೇಟೆ, ಬೆಂಗಳೂರು–೫೬೦ ೦೧೮<br>ಮೊದಲ ಮುದ್ರಣ : ೨೦೧೧ |
| ೨೩. | ಚುಟುಕು ಸಾಹಿತ್ಯ ಪರಂಪರೆ<br>ಹಾಗೂ ಸಿ.ಪಿ.ಕೆ ಚುಟುಕುಗಳ<br>ಸಮೀಕ್ಷೆ (ಒಂದು ನೋಟ) | : | ಎ.ಎನ್.ಜಯರಾಂ |
| ೨೪. | ಆಲಿಕಲ್ಲು (ಹನಿಗವನಗಳು) | : | ಸಿ.ಪಿ.ಕೆ. ಚಿತ್ರಭಾನು ಪ್ರಕಾಶನ<br>೨೨೬೫/೧೯, 'ಭಾರತಿ'<br>೬ನೆಯ ಕ್ರಾಸ್, ೪ನೆಯ ಮೇನ್<br>ವಿನಾಯಕ ನಗರ, ಮೈಸೂರು–೫೭೦ ೦೧೨ |

--- ೦ ---